# ಮಾನುಷಿ

ತಿಂಗಳ ಪತ್ರಿಕೆ

ಜುಲೈ : 2000

❄ ಡಾ. ಬಾಬಾಸಾಹೇಬ್ ಅಂಬೇಡ್ಕರ್ ಮತ್ತು ಭಾರತದಲ್ಲಿ ಮಹಿಳಾ ವಿಮೋಚನೆಯ ಪ್ರಶ್ನೆ

❄ ಬಡತನ : ಸಂವಿಧಾನದ ಆಶಯಗಳು ಭಂಗ

❄ ಲಿಂಗ - ಬಡತನ ಮತ್ತು ಮಹಿಳಾಭಿವೃದ್ಧಿ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 15 ಸಂಚಿಕೆ : 6

ಜುಲೈ : 2000





ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


## *ಈ ಸಂಚಿಕೆಯಲ್ಲಿ......*






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಇತ್ತೀಚೆಗೆ ಮಹಿಳಾ ವಿಮೋಚನೆಯನ್ನು ಕುರಿತು ನಡೆಯುತ್ತಿರುವ ಚರ್ಚೆಯಲ್ಲಿ ಮಹಿಳೆ ಹಾಗೂ ಜಾತಿಯ ಪ್ರಶ್ನೆಯನ್ನು ತಾತ್ವಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಪ್ರಯತ್ನಗಳು ಕಂಡುಬರುತ್ತಿವೆ. ಮಹಿಳಾ ಚಳುವಳಿಯ ದಿಕ್ಕನ್ನು ಪ್ರಶ್ನಿಸುವ ಹಾಗೂ ಮಹಿಳೆಯರ ಸಮಸ್ಯೆಯೊಂದಿಗೆ ತಳಕು ಹಾಕಿಕೊಂಡಿರುವ ಪಿತೃಪ್ರಾಧಾನ್ಯತೆ, ಜಾತಿ ಹಾಗೂ ವರ್ಗದ ಸಂಕೀರ್ಣತೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಅಂಬೇಡ್ಕರ್, ಪುಲೆ ಹಾಗೂ ಮಾರ್ಕ್ಸ್‌ವಾದದ ವ್ಯಾಖ್ಯಾನಗಳು ಪೂರಕವಾಗಿವೆ.

ಈ ಸಂಚಿಕೆಯಲ್ಲಿ ಮಹಿಳಾ ವಿಮೋಚನೆಯನ್ನು ಕುರಿತು ಅಂಬೇಡ್ಕರ್‌ರವರ ಚಿಂತನೆಯ ಮೂಲವನ್ನು ಆಧರಿಸಿದ ಪ್ರತಿಮಾರವರ ಲೇಖನವನ್ನು ಮಾನಸದ ಓದುಗರಿಗಾಗಿ ಪ್ರಕಟಿಸಿದ್ದೇವೆ. ಮಹಿಳಾ ಸಂಘಟನೆಗಳು ಜಾತಿಯ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಿದ್ದರೂ, ಪಿತೃಪ್ರಾಧಾನ್ಯತೆಯ ಪರಿಕಲ್ಪನೆಯನ್ನು ಕುರಿತು ನೀಡಿದ ವಿಶ್ಲೇಷಣೆಯ ಒತ್ತನ್ನು, ಜಾತಿಯ ವಿಶ್ಲೇಷಣೆಗೆ ನೀಡಿಲ್ಲವೆಂಬ ಆರೋಪ ಮಾಡಲಾಗಿದೆ. ಈ ಆರೋಪವು ಹುರುಳಿಲ್ಲದ ಆರೋಪವೆಂಬ ವಾದವನ್ನು ಸಹ ಮಂಡಿಸಲಾಗಿದೆ. ಶ್ರೇಣೀಕೃತ ವ್ಯವಸ್ಥೆಯಾದ ಜಾತಿ ಪದ್ಧತಿಯು ಪಿತೃಪ್ರಾಧಾನ್ಯತೆಯ ಅಂಶವನ್ನು ಅಂತರ್ಗತವಾಗಿ ಒಳಗೊಂಡಿದ್ದು, ಇದು ಮಹಿಳೆಯರ ಸಮಸ್ಯೆ ಹೇಗೆ ಕಾರಣವಾಗಿದೆಯೆನ್ನುವುದನ್ನು ಲೇಖಕಿಯು ವಿಶ್ಲೇಷಿಸಿದ್ದಾರೆ.

ಮಹಿಳಾ ಸಂಘಟನೆಗಳು ಜಾತಿ ಪದ್ಧತಿಯ ವಿರೋಧಿ ನಿಲುವನ್ನು ಹೊಂದಿ ಹಲವಾರು ಪ್ರಗತಿಪರ ಹೋರಾಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೂ ಮಹಿಳಾ ಸಮಸ್ಯೆಯ ವಿಶ್ಲೇಷಣೆಯಲ್ಲಿ, ಜಾತಿ ಪದ್ಧತಿ, ಪಿತೃಪ್ರಾಧಾನ್ಯತೆ, ವರ್ಗ ಹಾಗೂ ಲೈಂಗಿಕತೆ ಇವುಗಳ ನಡುವೆ ಸಮರ್ಥವಾದ ತಾರ್ಕಿಕ ಕೊಂಡಿಯನ್ನು ಸ್ಥಾಪಿಸುವಲ್ಲಿ ಯಶಸ್ವಿಯಾಗದಿರುವುದು ಕಂಡುಬರುತ್ತದೆ.

ಈ ನಿಟ್ಟಿನಲ್ಲಿ ಮಹಿಳಾ ಸಂಘಟನೆಗಳು ಸಕಾರಾತ್ಮಕ ಚರ್ಚೆಯನ್ನು ನಡೆಸಬೇಕಾದುದು ಅತ್ಯಗತ್ಯವಾಗಿದೆ. ಈ ಅಂಶಗಳತ್ತ ಚರ್ಚೆ, ಸಂವಾದ, ನಡೆಸಿ ತಾತ್ವಿಕ ಚೆಲ್ಲುವುದರ ಮೂಲಕ ಮಹಿಳಾ ಚಳುವಳಿ ಹೆಚ್ಚು ಸಂವೇದನಾಶೀಲ ಹಾಗೂ ಕ್ರಿಯಾಶೀಲವಾಗಬೇಕಾಗುತ್ತದೆ. ಈ ವಿಷಯವನ್ನು ಕುರಿತು ಓದುಗರಿಂದ ಚರ್ಚೆಯನ್ನು ಆಹ್ವಾನಿಸುತ್ತೇವೆ.

○

# ಡಾ. ಬಾಬಾಸಾಹೇಬ್ ಅಂಬೇಡ್ಕರ್ ಮತ್ತು ಭಾರತದಲ್ಲಿ ಮಹಿಳಾ ವಿಮೋಚನೆಯ ಪ್ರಶ್ನೆ

ಮೂಲ ಮರಾಠಿ : ಪ್ರತಿಮಾ ಪರ್ದೇಶಿ
ಇಂಗ್ಲಿಷ್ ಅನುವಾದ : ಡಾ. ಶರ್ಮಿಳಾ ರೆಗೆ
ಕನ್ನಡಕ್ಕೆ ಸಂಗ್ರಹಾನುವಾದ : ಸಿ.ಜಿ. ಮಂಜುಳಾ

*[ಪುಣೆಯ ಕ್ರಾಂತಿಸಿನ್ಹಾ ನಾನಾ ಪಾಟೀಲ್ ಅಕಾಡೆಮಿ ಮಾಲಿಕೆಯಲ್ಲಿ ಪ್ರಕಟವಾಗಿರುವ ಪ್ರತಿಮಾ ಪರ್ದೇಶಿ ಅವರ ಮೂಲ ಕೃತಿ 60 ಪುಟಗಳನ್ನು ಹೊಂದಿದೆ. ಸಂಸತ್ ಸದಸ್ಯ, ವಕೀಲ ಪ್ರಕಾಶ್ ಅಂಬೇಡ್ಕರ್ ಅವರ ಮುನ್ನುಡಿ ಇರುವ ಈ ಕೃತಿಯನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಭಾಗ ಪಾಹತುಷಾಹಿ ಅವಧಿಯಲ್ಲಿ ಮಹಾರಾಷ್ಟ್ರದಲ್ಲಿ ಮಹಿಳಾ ಪ್ರಶ್ನೆಗೆ ಸಂಬಂಧಿಸಿದಂತೆ ಸೃಷ್ಟಿಯಾದ ವಿಭಿನ್ನ ಸೈದ್ಧಾಂತಿಕ ನಿಲುವುಗಳ ವಿವರವಾದ ವಿಶ್ಲೇಷಣೆಗೆ ಸಂಬಂಧಿಸಿದೆ. ಈ ಸೈದ್ಧಾಂತಿಕ ನಿಲುವುಗಳನ್ನು 5 ಮುಖ್ಯ ಭಾಗಗಳಾಗಿ ವರ್ಗೀಕರಿಸಲಾಗಿದೆ.*

1. *ಬ್ರಾಹ್ಮಣಿಕೆಯ ಪುನರುಜ್ಜೀವನದ ನಿಲುವು (ತಿಲಕರಿಂದ ಸಮಕಾಲೀನ ರಾಷ್ಟ್ರೀಯ ಸೇವಿಕಾ ಸಮಿತಿಯವರೆಗೆ ಕಂಡುಬರುವ ಚಿಂತನೆಯ ಮಾರ್ಗ)*
2. *ಬ್ರಾಹ್ಮಣಿಕೆಯ ಸುಧಾರಣಾವಾದಿ ನಿಲುವು (ಲೋಕಿತ್‌ವಾದಿ, ಅಗರ್ಕರ್, ಎಂ. ಜಿ. ರಾನಡೆ ಮತ್ತಿತರರು ಪ್ರತಿನಿಧಿಸುವಂತದ್ದು)*
3. *ಬ್ರಾಹ್ಮಣೇತರ ಸುಧಾರಣಾವಾದಿ ನಿಲುವು (ಪಂಡಿತಾ ರಮಾಬಾಯಿ, ಮಹರ್ಷಿ ಶಿಂಧೆ ಮತ್ತಿತರರು ಪ್ರತಿನಿಧಿಸುವಂತದ್ದು)*
4. *ಬ್ರಾಹ್ಮಣೇತರ ಕ್ರಾಂತಿಕಾರಿ ನಿಲುವು (ಜೋತಿಬಾ ಫುಲೆ, ತಾರಾಬಾಯಿ ಶಿಂಧೆ, ಡಾ. ಬಾಬಸಾಹೇಬ್ ಅಂಬೇಡ್ಕರ್ ಮತ್ತಿತರರು ಪ್ರತಿನಿಧಿಸುವಂತದ್ದು)*
5. *ಮಾರ್ಕ್ಸ್‌ವಾದಿ ನಿಲುವು (ವರ್ಗವಾಗಿ ಜಾತಿ ಕುಸಿಯುತ್ತಿರುವಾಗ, ಬ್ರಾಹ್ಮಣಿಕೆಯ ನಿಲುವು ಅಳವಡಿಸಿಕೊಳ್ಳುವುದು)*

*ಕೃತಿಯ ಎರಡನೇ ಭಾಗ ಭಾರತದಲ್ಲಿ ಮಹಿಳೆಯರ ವಿಮೋಚನೆ ಪ್ರಶ್ನೆಗೆ ಸಂಬಂಧಿಸಿದಂತೆ ಡಾ. ಅಂಬೇಡ್ಕರ್ ಅವರ ನಿಲುವು, ಚಿಂತನೆಗಳನ್ನು ವಿವರವಾಗಿ ವಿಶ್ಲೇಷಿಸುತ್ತದೆ. ಮೂರನೆಯ ಭಾಗ, ಮಹಿಳಾ ವಿಮೋಚನೆ ಕುರಿತಂತೆ ಬ್ರಾಹ್ಮಣೇತರ ನಿಲುವುಗಳ ಹಾದಿಯನ್ನು ವಿವರವಾಗಿ ಬಿಚ್ಚಿಡುತ್ತದೆ. ಇಲ್ಲಿ ಎರಡನೆಯ ಭಾಗದ ಅನುವಾದವನ್ನು ವಿವರವಾಗಿ ನೀಡಲಾಗಿದೆ]*

**ಪರಿಚಯ :**

20ನೇ ಶತಮಾನದ ಮಹಾರಾಷ್ಟ್ರದಲ್ಲಿ ಮಹಿಳಾ ಪ್ರಶ್ನೆಗೆ ಸಂಬಂಧಿಸಿದಂತೆ ಕಂಡುಬಂದ ವಿಭಿನ್ನ ನಿಲುವುಗಳ ಒಳಗೇ ಡಾ. ಅಂಬೇಡ್ಕರ್ ಚಿಂತನೆಯ ವಿಶ್ಲೇಷಣೆಯನ್ನು ಗುರುತಿಸಬೇಕಿದೆ. ಕೆಲವರು ಬ್ರಾಹ್ಮಣಿಕೆಯ ಚೌಕಟ್ಟಿನೊಳಗೆ ಮತ್ತೆ ಕೆಲವು ಹಿಂದೂವಾದದ ಪರಿಧಿಯೊಳಗೆ ಮಹಿಳಾ ಪ್ರಶ್ನೆ ಮುಂದಿಟ್ಟಿದ್ದಾರೆ. ಇನ್ನೂ ಕೆಲವರು, ಈ ಪ್ರಶ್ನೆಯನ್ನು ಆ ಕಾಲದ ಬ್ರಾಹ್ಮಣೇತರ ಚಿಂತನೆಯ ಜೊತೆಗೆ ಒಟ್ಟುಗೂಡಿಸಲು ಪ್ರಯತ್ನಿಸಿದ್ದಾರೆ. ಮಾರ್ಕ್ಸ್‌ವಾದಿ ವರ್ಗದ ಚೌಕಟ್ಟು, ದುಡಿಯುವ ವರ್ಗದ ಮಹಿಳೆಯರಿಗೆ ದನಿ ನೀಡಿತು. ಬ್ರಾಹ್ಮಣೇತರ ಕ್ರಾಂತಿಕಾರಿ ಚಿಂತನೆಯ ಧಾಟಿ, ಜಾತಿ, ವರ್ಗ ಹಾಗೂ ಪಿತೃಪ್ರಾಧಾನ್ಯದ ಮೂರು ವ್ಯವಸ್ಥೆಗಳ ವಿರುದ್ಧ ಆಕ್ರಮಣ ಆರಂಭಿಸಿತು. ಈ ಚಿಂತನೆಯ ಧಾಟಿಯೇ ಡಾ. ಅಂಬೇಡ್ಕರ್‌ರ ಕೃತಿಗಳಲ್ಲಿ ಪ್ರತಿಬಿಂಬಿತವಾಗಿದೆ. ಮಹಿಳೆಯರ ಪರಾಧೀನತೆಗೂ ಜಾತಿ ವ್ಯವಸ್ಥೆಗೂ ಇರುವ ಸಂಪರ್ಕವನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ. ಅವರ ಕೃತಿಗಳು ಹಾಗೂ ಭಾಷಣಗಳಲ್ಲಿ ಕಂಡುಬರುವ ಈ ಕೆಳಗಿನ ವಿಚಾರಗಳ ಮೂಲಕ ಇದನ್ನು ವಿವರವಾಗಿ ಚಿತ್ರಿಸಬಹುದು.

1. ಮಹಿಳೆಯರು ಜಾತಿ ವ್ಯವಸ್ಥೆಯ ಹೆಬ್ಬಾಗಿಲು.
2. ಜಾತಿವ್ಯವಸ್ಥೆ ಮಹಿಳೆಯರ ಪರಾಧೀನತೆಯನ್ನು ಮತ್ತಷ್ಟು ಬಲಪಡಿಸುತ್ತದೆ.
3. ಬ್ರಾಹ್ಮಣಿಕೆಯ ಸಂಸ್ಕೃತಿ ಮಹಿಳೆಯರ ಪರಾಧೀನತೆಗೆ ಕಾರಣ.

4. ಜಾತಿ ಆಧಾರಿತ ಪಿತೃಪ್ರಧಾನ ಕಾನೂನುಗಳಿಗೆ ಪ್ರತಿಯಾಗಿ ಹಿಂದೂ ಸಂಹಿತೆ ಮಸೂದೆ (ಹಿಂದೂ ಕೋಡ್ ಬಿಲ್).
5. ದಲಿತ ಮಹಿಳೆಯರ ಅಸ್ತಿತ್ವ ಸ್ಥಾಪಿಸುವ ಪ್ರಯತ್ನಗಳು.
6. ದಲಿತ ಮಹಿಳೆಯರಲ್ಲಿ ರಾಜಕೀಯ ಪ್ರಜ್ಞೆಯ ಏರಿಕೆ.
7. ಮಹಿಳೆಯರ ವಿರುದ್ಧದ ಹಿಂಸಾಚಾರ ಆಚರಣೆಗಳಿಗೆ ವಿರೋಧ.
8. ರಾಜಕೀಯ ಪರಂಪರೆ ಹಾಗೂ ಮಹಾತ್ಮಾ ಫುಲೆ ಅವರ ಬೌದ್ಧಿಕ ಉತ್ತರಾಧಿಕಾರ.

ಈ ಎಲ್ಲ ವಿಚಾರಗಳನ್ನು ಈಗ ವಿವರವಾಗಿ ಚರ್ಚಿಸಬಹುದು.

**ಮಹಿಳೆಯರು ಜಾತಿ ವ್ಯವಸ್ಥೆಯ ಹೆಬ್ಬಾಗಿಲು :**

ಜಾತಿ ವ್ಯವಸ್ಥೆಯ ತಮ್ಮ ವಿಶ್ಲೇಷಣೆಯಲ್ಲಿ, ಮಾಂಸ ತಿನ್ನುವಿಕೆಯಲ್ಲಿ ಅಸ್ಪೃಶ್ಯತೆಯ ಮೂಲವನ್ನು ಹುಡುಕಿ, ಜಾತಿಗಳು ಬೇಲಿ ಹಾಕಿದ ವರ್ಗಗಳು ಎಂದು ಪ್ರಸ್ತಾಪಿಸುತ್ತಾರೆ. 'ಅಂತರಜಾತಿ ವಿವಾಹ ಇಲ್ಲದಿರುವುದು ಅಥವಾ ಸಗೋತ್ರ ವಿವಾಹ ಜಾತಿಯ ಮುಖ್ಯ ಲಕ್ಷಣ' ಎಂದು ಅವರು ಹೇಳುತ್ತಾರೆ. ಜಾತಿಯ ಈ ಚರ್ಚೆಯಲ್ಲಿ, ಜಾತಿ ವ್ಯವಸ್ಥೆ ಹಾಗೂ ಮಹಿಳೆಯ ಪರಾಧೀನತೆಯ ಅಂತರ್ಗತ ಸಂಬಂಧವನ್ನು ಅಂಬೇಡ್ಕರ್ ವಿವರಿಸುತ್ತಾರೆ. ಎಂದರೆ ಅಂಬೇಡ್ಕರ್‌ರ ಜಾತಿ ವ್ಯವಸ್ಥೆಯ ವಿಶ್ಲೇಷಣೆಯಲ್ಲಿ ಮಹಿಳೆಯ ಪರಾಧೀನತೆ ಅಂಶ ಅಂತರ್ಗತವಾದದ್ದು.

ಡಾ. ಅಂಬೇಡ್ಕರ್‌ರ ಪ್ರಕಾರ, ಅಶುದ್ಧತೆ ಅಥವಾ ಅಸ್ಪೃಶ್ಯತೆಯ ಅಂಶ ಜಾತಿ ವ್ಯವಸ್ಥೆಯ ಮುಖ್ಯ ಲಕ್ಷಣವಾಗುವುದಿಲ್ಲ, ಬದಲಾಗಿ, ಸಗೋತ್ರ ವಿವಾಹ ಜಾತಿ ವ್ಯವಸ್ಥೆಯ ಪ್ರಾಥಮಿಕ ಹಾಗೂ ಮುಖ್ಯ ಲಕ್ಷಣವಾಗುತ್ತದೆ. ಸಗೋತ್ರ ವಿವಾಹ ಸಮಾಜದಲ್ಲಿ ನೆಲೆಸಿ, ಕಾಪಾಡಿಕೊಂಡು ಬಂದ ರೀತಿಯನ್ನು ಪರಿಶೀಲಿಸಿದಲ್ಲಿ, ಜಾತಿ ವ್ಯವಸ್ಥೆಯ ಮೂಲವನ್ನು ಕಂಡುಹಿಡಿಯಬಹುದು. ಸಗೋತ್ರ ವಿವಾಹ ಆಚರಣೆಯಲ್ಲಿರುವ ಸಮಾಜದಲ್ಲಿ, ಜಾತಿ ಇರುವುದಿಲ್ಲ, ಆದರೆ ಭಾರತದಲ್ಲಿ ಜಾತಿಗಳು ಪ್ರಬಲವಾಗಿವೆ. ಗುಂಪುಗಳ ಮಧ್ಯೆ ವಿಭಿನ್ನತೆಗಳು (ವರ್ಗಗಳು) ಹೆಚ್ಚಾದಾಗ ಭಾರತೀಯ ಸಂದರ್ಭದಲ್ಲಿ ಜಾತಿಗಳು ಹುಟ್ಟಿಕೊಂಡವು.

ಆನಂತರ ಸಗೋತ್ರ ವಿವಾಹ ಆಚರಣೆ ಸಮಾಜದಲ್ಲಿ ಹೇಗೆ ಕಾಪಾಡಿಕೊಂಡು ಬರಲಾಯಿತು ಎಂಬ ಬಗ್ಗೆ ಪ್ರಶ್ನೆಗಳನ್ನು ಎತ್ತುತ್ತಾರೆ. ಎಲ್ಲಾ ಸದಸ್ಯರಿಗೆ ಬರೀ ಸೂಚನೆ ನೀಡುವ ಮೂಲಕ ಇದು ಸಾಧ್ಯವಿರಲಿಲ್ಲ. ಜನ ಮತ್ತು ಗುಂಪುಗಳು ನಿಕಟವಾಗಿ ಬದುಕಿದಾಗ, ಒಟ್ಟಾಗಿ ಬೆರೆತು ಸಮಗ್ರ ಸಮಾಜ ಸೃಷ್ಟಿಸುವುದು ಸಹಜವಾದುದೇ ಆಗಿತ್ತು. ಹೇಗೆ ತಾನೆ ಈ ಸಹಜವಾದ ಮಾನವೀಯ ಪ್ರವೃತ್ತಿ ನಿಯಂತ್ರಿಸಿ, ಕಟ್ಟುಪಾಡುಗಳು ವಿಧಿಸಿ ಜಾತಿ ಉದಯವಾಗುವಂತೆ ನೋಡಿಕೊಳ್ಳಲಾಯಿತು? ಇಂತಹ ಪರಿಧಿಗಳನ್ನು ಸೃಷ್ಟಿಸುವುದು ಮುಖ್ಯವಾಗಿತ್ತು. ಇದನ್ನು ಜನರು ಸಾಧಾರಣವಾಗಿ ದಾಟುವಂತಹದ್ದಾಗಿರಬಾರದು. ಇದರಿಂದ ವಿವಾಹಗಳು ಜಾತಿಯೊಳಗೇ ನಡೆಯುವುದು ಖಚಿತವಿತ್ತು. ಆದರೆ ಜಾತಿ ಗುಂಪಿನೊಳಗೇ ವಿವಾಹದ ನಿರ್ಬಂಧ ಕೆಲವು ಸಮಸ್ಯೆಗಳನ್ನೂ ತಂದಿಟ್ಟಿತು. ಸಾಮಾನ್ಯವಾಗಿ ಯಾವುದೇ ಗುಂಪಿನಲ್ಲೂ ಗಂಡು ಹೆಣ್ಣು ಪ್ರಮಾಣ ಸಮತೋಲನದಲ್ಲಿರಬೇಕು. ಈ ಪ್ರಮಾಣದಲ್ಲಿ ತೀವ್ರ ಅಸಮತೋಲನ-'ಹೆಚ್ಚುವರಿ ಪುರುಷರು' ಅಥವಾ 'ಹೆಚ್ಚುವರಿ ಮಹಿಳೆಯರು' ಸಮಸ್ಯೆ ಸೃಷ್ಟಿಸುತ್ತಿತ್ತು. ಎಂದರೆ, ಹೆಂಡತಿ ಗಂಡನಿಗಿಂತ ಮುಂಚೆ ಸತ್ತಲ್ಲಿ, ಪುರುಷ ಹೆಚ್ಚುವರಿ ಪುರುಷ ಆಗುತ್ತಿದ್ದ ಹಾಗೆಯೇ ಪತಿಪತ್ನಿಗಿಂತ ಮುಂಚೆ ಸತ್ತಲ್ಲಿ ಆಕೆ ಹೆಚ್ಚುವರಿ ಮಹಿಳೆ ಆಗುತ್ತಿದ್ದಳು. ಗುಂಪಿಗೆ ಸಮಸ್ಯೆ ಎದುರಾಗುತ್ತಿತ್ತು; ಈ ಹೆಚ್ಚುವರಿ ಮಹಿಳೆಯನ್ನು ಏನು ಮಾಡುವುದು? ಡಾ. ಅಂಬೇಡ್ಕರ್ ಪ್ರಕಾರ, ಗಂಡು-ಹೆಣ್ಣು ಪ್ರಮಾಣ ಕಾಪಾಡಲು, ಸಗೋತ್ರ ವಿವಾಹ ವ್ಯವಸ್ಥೆ ಹಾಗೂ ಜಾತಿ ವ್ಯವಸ್ಥೆಯನ್ನು ಹಾಗೇ ಮುಂದುವರಿಸಲು 4 ವಿವಿಧ ಆಚರಣೆಗಳನ್ನು ಕೈಗೊಳ್ಳಲಾಯಿತು. ಅವು :

1. ಸತಿ ಆಚರಣೆ
2. ಬಲವಂತದ ವಿಧವಾ ಪಟ್ಟ
3. ಬಲವಂತ ಬ್ರಹ್ಮಚರ್ಯ
4. ವಯಸ್ಸಾದ ಪುರುಷರು ಮತ್ತು ವಿಧುರರೊಡನೆ ಬಾಲಕಿಯರ ವಿವಾಹ

ಈ ಎಲ್ಲಾ ಆಚರಣೆಗಳನ್ನು ಅಂಬೇಡ್ಕರ್‌ರವರು ವಿವರವಾಗಿ ವಿಶ್ಲೇಷಿಸಿದ್ದಾರೆ.

**1. ಸತಿ ಆಚರಣೆ :**

ಪತಿಯ ಮರಣದ ನಂತರ, ಮಹಿಳೆಯರನ್ನು ಹೆಚ್ಚುವರಿ ಮಹಿಳೆಯಾಗಿ ಪರಿಗಣಿಸಲಾಗುತ್ತಿತ್ತು. ಗುಂಪಿನಲ್ಲಿ ಇದರಿಂದ ಸಮತೋಲನಕ್ಕೆ ಧಕ್ಕೆಯಾಗುತ್ತಿತ್ತು. ಈ ಸಂಖ್ಯೆಯ ಅಸಮತೋಲನ ತಡೆಗೆ, ಮಹಿಳೆಯನ್ನು ಪತಿಯ ಚಿತೆಯ ಮೇಲಿಟ್ಟು ಸುಡಲಾಗುತ್ತಿತ್ತು. ಇಂತಹ ಆಚರಣೆ ಅಳವಡಿಸಿಕೊಳ್ಳಲು ಕಾರಣವೆಂದರೆ, ವಿಧವೆ ಜೀವಿಸಿದರೆ ಅನೇಕ ಅಪಾಯಗಳಿವೆ ಎಂಬುದು ಕಾರಣ; ಮೊದಲನೆಯದು, ತನ್ನ ಜಾತಿ ಗುಂಪಿನ ಮತ್ತೊಬ್ಬನನ್ನು ಆಕೆ ವಿವಾಹವಾಗಬಹುದು, ಈ ಮೂಲಕ ತನ್ನ ಜಾತಿ ಗುಂಪಿನ ಎಳೆಯ ವಧುಗಳ ಮೀಸಲಾಹ ಹಕ್ಕನ್ನು ಉಲ್ಲಂಘಿಸಿದಂತಾಗುತ್ತದೆ. ಆಕೆ ತನ್ನ ಜಾತಿಯ ಹೊರಗೆ

ಬೇರೆ ಮನುಷ್ಯನನ್ನು ವಿವಾಹವಾದರೆ, ಸಗೋತ್ರ ವಿವಾಹದ ಎಲ್ಲೆಗಳು ಮುರಿದು ಬೀಳುತ್ತದೆ. ಹೀಗಾಗಿ ಸತ್ತ ಪತಿಯ ಚಿತೆಯ ಮೇಲೆ ಆಕೆಯನ್ನು ಸುಡುವುದು ಅಗತ್ಯ ಎಂದು ಭಾವಿಸಲಾಯಿತು. ಹೀಗಿದ್ದೂ, ಸತಿ ಆಚರಣೆ ಮೂಲಕವೇ ಜಾತಿ ಗುಂಪನ್ನು ಸಮಗ್ರವಾಗಿ ಇಡುವುದು ಯಾವಾಗಲೂ ಸಾಧ್ಯವಿರುತ್ತಿರಲಿಲ್ಲ. ಇದರಿಂದ ಇದರ ಆಚರಣೆಗಳನ್ನೂ ಅಳವಡಿಸಿಕೊಳ್ಳಲಾಯಿತು.

**2. ಬಲವಂತದ ವಿಧವಾ ಪಟ್ಟ :**

ಮಹಿಳೆಯರ ಮೇಲೆ ವಿಧವಾಪಟ್ಟ ಜಾರಿಗೊಳಿಸುವ ಆಚರಣೆ 'ಸತಿ'ಗಿಂತ ಸ್ವಲ್ಪ ಕಡಿಮೆ ತೀಕ್ಷ್ಣತೆ ಉಳ್ಳದ್ದು ಎಂದು ಡಾ. ಅಂಬೇಡ್ಕರ್ ವಾದಿಸುತ್ತಾರೆ. ವಿಧವೆಯ 'ಅನೈತಿಕ' ನಡವಳಿಕೆ ಸಾಧ್ಯತೆಯನ್ನು ತಲೆ ಬೋಳಿಸಿ ಆಕೆಯನ್ನು ಯಾರೂ ಇಷ್ಟಪಡದ ರೀತಿ ಮಾಡಿ ನಿಯಂತ್ರಿಸಲಾಗುತ್ತಿತ್ತು. ಆಕೆಯ ಚಲನಶೀಲತೆ ಹಾಗೂ ಆಹಾರಾಭ್ಯಾಸ ಕ್ರಮಗಳ ಮೇಲೆ ಹಲವಾರು ನಿರ್ಬಂಧಗಳನ್ನು ವಿಧಿಸಲಾಗುತ್ತಿತ್ತು. ಆಕೆಯ ಗುಂಪಿನ ಗಂಡಸರ ಮೇಲೆ ಯಾವುದೇ 'ಆಮಿಷ' ಉಂಟಾಗಬಾರದೆಂದು ಖಚಿತಪಡಿಸಿಕೊಳ್ಳುವುದು ಇದರ ಉದ್ದೇಶವಾಗಿತ್ತು.

**3. ಬಲವಂತದ ಬ್ರಹ್ಮಚರ್ಯ :**

ಜಾತಿಯಾಗ ಬಯಸುವ ಗುಂಪುಗಳಿಗೆ ಸಮತೋಲನದ ಗಂಡು-ಹೆಣ್ಣು ಪ್ರಮಾಣ ಮುಖ್ಯ ವಿಚಾರ. ಜನರ ಅಗತ್ಯಗಳು ಜಾತಿಯ ಗುಂಪಿನ ಒಳಗೇ ತೃಪ್ತಿಯಾಗದಿದ್ದಲ್ಲಿ, ಅವರು ಜಾತಿಯ ಹೊರಗೆ ಹೋಗುವ ಸಾಧ್ಯತೆಯಿದೆ ಎಂದು ಅಂಬೇಡ್ಕರ್ ವಾದಿಸುತ್ತಾರೆ. ಹೀಗಾಗಿ ಗುಂಪಿನಲ್ಲಿ ವಿವಾಹ ಪುರುಷರು ಮತ್ತು ಮಹಿಳೆಯರ ಸಂಖ್ಯೆಯ ಅಸಮತೋಲನ ಭರ್ತಿ ಮಾಡುವ ಸಮಸ್ಯೆ ಹಾಗೂ ಜಾತಿಗಳ ಸಮಸ್ಯೆ, ಅಂತಿಮ ವಿಶ್ಲೇಷಣೆಯಲ್ಲಿ ಒಂದೆ. ಅಲ್ಲದೆ, ಹೆಚ್ಚುವರಿ ಪುರುಷನನ್ನು, ಆತ ಪುರುಷನಾಗಿರುವ ಕಾರಣದಿಂದಲೇ ಸಮಾಜದಲ್ಲಿ ಸುಟ್ಟುಹಾಕುವುದಿಲ್ಲ. ಜಾತಿ ಗುಂಪು ಕಾಪಾಡಿಕೊಂಡು ಬರಲು ಹೆಚ್ಚುವರಿ ಪುರುಷ ಅಪಾಯಕಾರಿ ಎನಿಸಿದರೂ, ಮಹಿಳೆಯನ್ನು ಸುಟ್ಟ ರೀತಿ ಸುಡುವುದಿಲ್ಲ. ಬದಲಿಗೆ ಆತನ ಮೇಲೆ ಬ್ರಹ್ಮಚರ್ಯ ಹೇರಲಾಗುತ್ತದೆ. ಕೆಲವು ವಿಧುರರು ತಾವೇ ಬ್ರಹ್ಮಚರ್ಯ ಅಥವಾ ಸನ್ಯಾಸ ಆಚರಿಸುತ್ತಾರೆ. ಹೀಗಿದ್ದೂ, ಈ ಆಚರಣೆಗಳು, ಮನುಷ್ಯರಲ್ಲಿನ ಸಹಜ ಬಯಕೆಗಳಿಗೆ ವಿರುದ್ಧವಾದುದು.

**4. ವಯಸ್ಸಾದ ಪುರುಷರೊಡನೆ ಬಾಲಕಿಯರ ವಿವಾಹ :**

ಬ್ರಹ್ಮಚಾರಿಯಾಗಿರುವ ಪುರುಷ ಅಥವಾ ವಿಶ್ವವನ್ನೇ ತ್ಯಜಿಸಿದ ಪುರುಷ, ಜಾತಿ ಗುಂಪಿನ ವೃದ್ಧಿಗೆ ಅನುಪಯುಕ್ತ ಅಥವಾ ಸತ್ತಂತೆ. ಅಸ್ತಿತ್ವದ ಹೋರಾಟದಲ್ಲಿ ಪ್ರತಿ ಜಾತಿಯೂ ತನ್ನ ಸಂಖ್ಯೆ ಹೆಚ್ಚಿಸಿಕೊಳ್ಳಬೇಕು. ಹೀಗಾಗಿ ಹೆಚ್ಚುವರಿ ಪುರುಷನ ಮೇಲೆ ಬ್ರಹ್ಮಚರ್ಯದ ಹೇರಿಕೆ ವಾಸ್ತವ ದೃಷ್ಟಿಯ ಆಚರಣೆಯಾಗುವುದಿಲ್ಲ. ಹೆಚ್ಚುವರಿ ಪುರುಷ ಗೃಹಸ್ಥಾಶ್ರಮದಲ್ಲಿ ಉಳಿದರೇ ಜಾತಿ ಗುಂಪಿನ ಹಿತಕ್ಕೆ ಅನುಕೂಲ ಎಂದರೆ ಜಾತಿ ಗುಂಪಿನ ಒಳಗೇ ಆತನಿಗೆ ವಧು ಹುಡುಕಬೇಕು. ಹೆಚ್ಚುವರಿ ಮನುಷ್ಯನನ್ನು ಜಾತಿ ಗುಂಪಿನೊಳಗೇ ಕಟ್ಟಿಹಾಕಬೇಕೆಂದರೆ, ಇನ್ನೂ ವಿವಾಹ ವಯಸ್ಸಿಗೆ ಕಾಲಿಡುವ ವಧು ಹುಡುಕುವುದು ಅನಿವಾರ್ಯವಾಗುತ್ತದೆ. ಇದು ಸಗೋತ್ರ ವಿವಾಹ ಹಾಗೂ ಜಾತಿ ಆಧಾರಿತ ನೈತಿಕತೆಯ ನಿಯಮಾವಳಿಗಳನ್ನು ಅಖಂಡವಾಗಿ ರಕ್ಷಿಸುತ್ತದೆ.

ಹೀಗೆ, ಜಾತಿ ಗುಂಪಿನ ಉದಯಕ್ಕಾಗಿ ಗಂಡು-ಹೆಣ್ಣು ಪ್ರಮಾಣದ ಅಸಮತೋಲನವನ್ನು ಸತಿ, ಬಲವಂತದ ವಿಧವಾ ಪಟ್ಟ, ಬಲವಂತದ ಬ್ರಹ್ಮಚರ್ಯ ಹಾಗೂ ವಯಸ್ಸಲ್ಲಿ ಹೊಂದಾಣಿಕೆ ಇಲ್ಲದ ವಿವಾಹಗಳ ಮೂಲಕ ನಿವಾರಿಸಿಕೊಳ್ಳಲಾಗುತ್ತಿತ್ತು. ಈ ಆಚರಣೆಗಳು ಹೆಣ್ಣನ್ನು ಶೋಷಿಸುವಂತಹವು. ಹೀಗಾಗಿ ಮಹಿಳೆಯರ ಲೈಂಗಿಕ ಶೋಷಣೆಯ ಮೂಲಕವೇ ಜಾತಿ ವ್ಯವಸ್ಥೆ ಕಾಪಾಡಲಾಗುತ್ತದೆ ಎಂದು ಡಾ. ಅಂಬೇಡ್ಕರ್ ಒತ್ತಿ ಹೇಳುತ್ತಾರೆ. ಮಹಿಳೆಯ ಲೈಂಗಿಕತೆ ಮೇಲೆ ಕಟ್ಟುಪಾಡು ಹಾಗೂ ನಿಯಂತ್ರಣದ ಮೂಲಕ, ಜಾತಿಗಳ ಸ್ವರೂಪವನ್ನು ಕಾಪಾಡಿಕೊಳ್ಳಬಹುದು. ಈ ದಿಸೆಯಲ್ಲಿ ಮಹಿಳೆಯರು ಜಾತಿ ವ್ಯವಸ್ಥೆಯ ಹೆಬ್ಬಾಗಿಲುಗಳು ಎಂದು ಡಾ. ಅಂಬೇಡ್ಕರ್ ವಾದಿಸುತ್ತಾರೆ.

ಸಮ್ಮಿಶ್ರ ವಿವಾಹಗಳನ್ನು ಜಾತಿ ವ್ಯವಸ್ಥೆ ಯಾವಾಗಲೂ ವಿರೋಧಿಸುತ್ತದೆ. ಆಚರಣೆ ವಿಧಿಗಳು, ಧರ್ಮ ಹಾಗೂ ಕಾನೂನು ಈ ಆಚರಣೆಯನ್ನು ಬಹಿಷ್ಕರಿಸಿವೆ. ಈ ವಾದವನ್ನು ಮತ್ತಷ್ಟು ಎಳೆಯುವುದಕ್ಕಾಗಿ, ಡಾ. ಅಂಬೇಡ್ಕರ್, ಹಿಂದೂತ್ವ ತತ್ವ ಕುರಿತ ತಮ್ಮ ಬರಹಗಳಲ್ಲಿ, ಈ ವಿಚಾರವನ್ನು ಇನ್ನಷ್ಟು ವಿವರವಾಗಿ ಚರ್ಚಿಸುತ್ತಾರೆ. ಮನುಸ್ಮೃತಿ ಉಲ್ಲೇಖಿಸಿ, ಮನುವಿಗೆ ಯಾರು ಯಾರನ್ನು ವಿವಾಹವಾಗಬಹುದು ಎಂಬ ಬಗ್ಗೆ ಸ್ಪಷ್ಟ ಚಿತ್ರವಿತ್ತು ಎಂದು ವಾದಿಸುತ್ತಾರೆ. ದ್ವಿಜಯ ತಮ್ಮ ಮೊದಲ ವಿವಾಹದಲ್ಲಿ ಕಡ್ಡಾಯವಾಗಿ ತನ್ನ ಜಾತಿಯದೇ ಹೆಂಗಸನ್ನು ವಿವಾಹವಾಗಬೇಕು; ನಂತರದ ವಿವಾಹಗಳಲ್ಲಿ, ಆತ ಕೆಳಗಿನ ವರ್ಣದ ಹೆಂಗಸರನ್ನು ವಿವಾಹವಾಗಬೇಕು. ಆದರೆ ಶೂದ್ರ ಮಹಿಳೆಯರು ಶೂದ್ರ ಪುರುಷನನ್ನು ಮಾತ್ರವೇ ವಿವಾಹವಾಗಬೇಕು. ಹೀಗಾಗಿ ಸಮ್ಮಿಶ್ರ ವಿವಾಹಗಳಿಗೆ ಮನುವಿನ ವಿರೋಧ ಸ್ಪಷ್ಟವಾದುದು. ಮನುವಿನ ಶಾಸನದಲ್ಲಿ, ತನ್ನದೇ ವರ್ಣದಲ್ಲಿನ ಮಹಿಳೆಯರನ್ನು ವಿವಾಹವಾಗುವುದು ಕಡ್ಡಾಯವಾಯಿತು.

ಧರ್ಮದ ವಿಶ್ಲೇಷಣೆಯಲ್ಲಿ ಡಾ. ಅಂಬೇಡ್ಕರ್ ಮತ್ತೊಮ್ಮೆ ಸಮ್ಮಿಶ್ರ ವಿವಾಹಗಳ ವಸ್ತುವನ್ನೂ ತೆಗೆದುಕೊಳ್ಳುತ್ತಾರೆ. ಅವರು ಈ ಪ್ರಶ್ನೆ ಕೇಳುತ್ತಾರೆ "ಯಾವುದನ್ನು ಧರ್ಮವೆಂದು

ಕರೆಯಬಹುದು?'' ಇದಕ್ಕೆ ಹೀಗೆ ಉತ್ತರಿಸುತ್ತಾರೆ - ''ಸಮಾನತೆ, ಸೋದರತ್ವ, ಸ್ವಾತಂತ್ರ್ಯ ಹಾಗೂ ನ್ಯಾಯಾದ ಸಹ ಅಸ್ತಿತ್ವವನ್ನು ಧರ್ಮವೆಂದು ಕರೆಯಬಹುದು'' ಹಿಂದೂವಾದ ಈ ವಿವರಣೆಗೆ ಹೇಗೆ ನಿಲುಕುವುದಿಲ್ಲವೆಂಬುದನ್ನು ಅವರು ಚರ್ಚಿಸುತ್ತಾರೆ. ನಾರದ ಸ್ಮೃತಿ ಹಾಗೂ ಮನುಸ್ಮೃತಿಯಲ್ಲಿ ನ್ಯಾಯ ಎನ್ನುವುದು ಇಲ್ಲದೇ ಇರುವುದನ್ನು ಒತ್ತಿ ಹೇಳುತ್ತಾರೆ. ಉದಾಹರಣೆಗೆ ಶ್ರುತಿ ಮತ್ತು ಸ್ಮೃತಿಯಲ್ಲಿ ವಿವರಿಸಲಾಗಿರುವ ಶಿಕ್ಷೆಗಳು, ವರ್ಣದೊಂದಿಗೆ ವಿಭಿನ್ನವಾಗಿದೆ. ಒಂದೇ ಅಪರಾಧಕ್ಕೆ, ಬ್ರಾಹ್ಮಣ 'ಪಣ' ನೀಡಿದರೆ, ವೇಶ್ಯ, ಹೆಚ್ಚು 'ಪಣ' ನೀಡಬೇಕು. ಆದರೆ ಶೂದ್ರರನ್ನು ಸಾರ್ವಜನಿಕವಾಗಿ ಥಳಿಸಬೇಕು. ಹೀಗಾಗಿ ಹಿಂದೂವಾದದಲ್ಲಿ ಸಮಾನತೆ-ನ್ಯಾಯ ಇಲ್ಲವೆಂದು ಅವರು ವಾದಿಸುತ್ತಾರೆ. ಸಾಮಾಜಿಕ ಚಲನಶೀಲತೆಗೂ ಇಲ್ಲಿ ಅವಕಾಶವೇ ಇಲ್ಲ. ಇದರಿಂದ ಸಮ್ಮಿಶ್ರ ವಿವಾಹಗಳನ್ನು ಇಲ್ಲಿ ತೀವ್ರವಾಗಿ ನಿಷೇಧಿಸಲಾಗಿದೆ.

ಹೀಗಿದ್ದೂ, ತೀವ್ರ ನಿಯಂತ್ರಣಗಳ ಮಧ್ಯೆಯೂ, ಸಮ್ಮಿಶ್ರ ವಿವಾಹಗಳು ನಡೆದಲ್ಲಿ, ಅಲ್ಲಿ ಅದನ್ನು ನಿಯಂತ್ರಿಸುವ ಕಾನೂನು ಪಿತೃಪ್ರಧಾನವಾಗಿರುತ್ತದೆ ಹಾಗೂ ಪೂರ್ವಾಗ್ರಹ ಪೀಡಿತವಾದುದಾಗಿರುತ್ತದೆ. ಎರಡು ಬಗ್ಗೆ ಸಮ್ಮಿಶ್ರ ವಿವಾಹಗಳಿವೆ; ಪ್ರತಿಲೋಮಾ (hypogamy) ಹಾಗೂ ಅನುಲೋಮ (hypergamy). ಅನುಲೋಮವೆಂದರೆ ಕೆಳಜಾತಿಯ ಹೆಂಗಸು ಹಾಗೂ ಮೇಲ್ಜಾತಿಯ ಪುರುಷನ ಮಧ್ಯದ ವಿವಾಹ. ಪ್ರತಿಲೋಮ ಎಂದರೆ ಮೇಲ್ಜಾತಿಯ ಹೆಂಗಸು ಹಾಗೂ ಕೆಳಜಾತಿಯ ಪುರುಷನ ಮಧ್ಯದ ವಿವಾಹ. 'ಪ್ರತಿಲೋಮ' ವಿವಾಹವು ಅಂಗೀಕಾರ್ಹವಲ್ಲ. ಏಕೆಂದರೆ ಇಲ್ಲಿ ಮಹಿಳೆ ಜಾತಿ ಕಟ್ಟುಪಾಡುಗಳನ್ನು ಮೀರಿರುತ್ತಾಳೆ. ಮಹಿಳೆಯರಿಂದ ಇಂತಹ ಉಲ್ಲಂಘನೆಗಳು ಜಾತಿ ವ್ಯವಸ್ಥೆಯ ವಿನಾಶಕ್ಕೆ ಕಾರಣವಾಗಬಹುದು. ಹೀಗಾಗಿ ಈ ಬಗೆಯ ವಿವಾಹವನ್ನು ಬಹಿಷ್ಕಾರದಂತಹ ಕ್ರಮಗಳ ಮೂಲಕ ಶಿಕ್ಷಿಸಲಾಗುತ್ತದೆ. ಇಂತಹ ವಿವಾಹದ ಬಹಿಷ್ಕಾರಕ್ಕೆ ಸೈದ್ಧಾಂತಿಕ ನೆಲೆಯಾಗಿ ಧಾರ್ಮಿಕ ಸಮರ್ಥನೆಗಳನ್ನು ಮುಂದಿಡಲಾಗುತ್ತದೆ. ಇಂತಹದಕ್ಕೆ ಹಲವು ಚಾರಿತ್ರಿಕ ಸಾಕ್ಷ್ಯಗಳೂ ದೊರೆಯುತ್ತದೆ. ಉದಾಹರಣೆಗೆ, ಗೇಲ್ ಓಂವೆಟ್ ತಮ್ಮ 'ದಲಿತರು ಹಾಗೂ ಪ್ರಜಾಸತ್ತಾತ್ಮಕ ಕ್ರಾಂತಿ: ವಸಾಹತು ಭಾರತದಲ್ಲಿ ಡಾ. ಅಂಬೇಡ್ಕರ್ ಮತ್ತು ಪ್ರಜಾಸತ್ತಾತ್ಮಕ ಚಳವಳಿ' ಎಂಬ ತಮ್ಮ ಕೃತಿಯಲ್ಲಿ, 'ಮಲ್ಲ' ಜಾತಿಯ ಬುದ್ಧಿವಂತ ಪುರುಷ ಹಾಗೂ ಬ್ರಾಹ್ಮಣ ಮಹಿಳೆಯ ವಿವಾಹದ ಉದಾಹರಣೆಯನ್ನು ನೀಡುತ್ತಾರೆ. ಜ್ಞಾನದ ಅನ್ವೇಷಣೆಯಲ್ಲಿ ಬ್ರಾಹ್ಮಣ ಗೃಹಕ್ಕೆ ಹೋಗುವ ಈ ಪುರುಷ ಇದೇ ಕಾರಣಕ್ಕಾಗಿ ತನ್ನ ಜಾತಿಯನ್ನೂ ಸುಳ್ಳು ಹೇಳುತ್ತಾನೆ. 'ಮಲ್ಲ' ಪುರುಷನ ಬುದ್ಧಿವಂತಿಕೆಗೆ ಮರುಳಾಗಿ, ಬ್ರಾಹ್ಮಣನ ಮಗಳು ಅವನನ್ನು ವಿವಾಹವಾಗುತ್ತಾಳೆ. ತನ್ನ ಪತಿ ಅಸ್ಪೃಶ್ಯನೆಂದು ಅನಂತರ ತಿಳಿದು, ಆಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಏಕೆಂದರೆ ತಮ್ಮ ಪ್ರತಿಲೋಮ ವಿವಾಹಕ್ಕೆ ಸಮಾಜದ ಮನ್ನಣೆ ಇಲ್ಲ ಎಂಬುದು ಆಕೆಗೆ ಅರಿವಿರುತ್ತದೆ. ಈ ಘಟನೆ ಮಹಿಳೆಯರು ತಮ್ಮೊಳಗೇ ಜಾತಿ, ವರ್ಣ ಹಾಗೂ ಪಿತೃಪ್ರಧಾನ ಸಾರ್ವಭೌಮತ್ವವನ್ನು ಪೂರ್ಣ ಅಂತರ್ಗತ ಮಾಡಿಕೊಂಡಿರುವುದನ್ನು ಬಿಚ್ಚಿಡುತ್ತದೆ. ಓಂವೆಟ್ ಇದೇ ಕೃತಿಯಲ್ಲಿ, 'ಪ್ರತಿಲೋಮ'ದ ಅನೈತಿಕತೆ ಹಾಗೂ 'ದೇವದಾಸಿ' ಪರಂಪರೆಯ ನ್ಯಾಯ ಸಮ್ಮತವಾಗಿರುವುದರ ಮುಖ್ಯಸಂಬಂಧವನ್ನೂ ಬಿಡಿಸುತ್ತಾರೆ. ಮುರಳಿಯರು ಹಾಗೂ ಮಾತಂಗಿಗಳು ದೇವಾಲಯ ನರ್ತಕಿಯರಿಗಿಂತ ವಿಭಿನ್ನವಾಗಿದ್ದು, ಗ್ರಾಮದಲ್ಲಿ ಸ್ವಲ್ಪ ಪ್ರಮಾಣದ ಸ್ವಾಯತ್ತತೆ ಅನುಭವಿಸುತ್ತಾರೆ ಎಂದು ಓಂವೆಟ್ ವದಿಸುತ್ತಾರೆ. ಆದರೆ ಈ ಪರಂಪರೆಯ ಮಾತೃಪ್ರಧಾನ ಸಂಸ್ಕೃತಿಯ ಎಳೆಗಳು, ಊಳಿಗಮಾನ್ಯ ವ್ಯವಸ್ಥೆಯ ಅಂತ್ಯ ಕಾಲದಲ್ಲಿ, ಮೇಲ್ಜಾತಿ ಪುರುಷರಿಗೆ ದಲಿತ ಮಹಿಳೆಯರ ಲೈಂಗಿಕ ಲಭ್ಯತೆಯನ್ನು ಸಾಂಸ್ಥಿಕಗೊಳಿಸಿತು - ಮೇಲ್ಜಾತಿ ಪುರುಷರಿಗೆ ದಲಿತ ಮಹಿಳೆಯರ ಲಭ್ಯತೆಯನ್ನು ಮೇಲ್ಜಾತಿ ಮಹಿಳೆಯರು ಮತ್ತು ಕೆಳಜಾತಿ ಪುರುಷರ ಸಂಬಂಧ ನಿಷೇಧವನ್ನೂ ಒಟ್ಟಿಗೇ ಗಮನಿಸಿದಲ್ಲಿ, ಲೈಂಗಿಕ ತತ್ವ ಮೀಮಾಂಸೆಯನ್ನು ಬಿಂಬಿಸಿದಂತಾಗುತ್ತದೆ. ಈ ಲೈಂಗಿಕ ತತ್ವ ಮೀಮಾಂಸೆ, ಭಾರತದ ಹಳ್ಳಿಗಳಲ್ಲಿ ಇಂದಿಗೂ ಇರುವಂತಹ ಜಾತಿ ವ್ಯವಸ್ಥೆ-ಪ್ರವೃತ್ತಿಯನ್ನು ಬಿಂಬಿಸುತ್ತದೆ.

ಒಟ್ಟಿನಲ್ಲಿ, ಜಾತಿ ವ್ಯವಸ್ಥೆ ಮಹಿಳೆಯರ ಮೇಲೆ ಹಲವು ನಿರ್ಬಂಧಗಳಿಂದ ಉದಯವಾಯಿತು. ಈ ನಿರ್ಬಂಧಗಳಿಗೆ ಧಾರ್ಮಿಕ ಹಾಗೂ ಪಾರಂಪರಿಕ ಸಮರ್ಥನೆಗಳು, ಒದಗಿ ಬಂದವು. ಇದರಿಂದಾಗಿಯೇ ಮಹಿಳೆಯರು ಜಾತಿ ವ್ಯವಸ್ತೆಯ ಹೆಬ್ಬಾಗಿಲು ಎಂಬ ಅಂತಿಮ ನಿರ್ಧಾರಕ್ಕೆ ಅಂಬೇಡ್ಕರ್ ಬಂದರು. ಈ ವಿಚಾರ ಜಾತಿ ವ್ಯವಸ್ಥೆಯ ಹುಟ್ಟು ಕುರಿತ ಅವರ ಬರವಣಿಗೆಗಳಲ್ಲಿ ಮಾತ್ರವಲ್ಲ, ಮಹಾಡ್ ಸತ್ಯಾಗ್ರಹ ಪರಿಷತ್‌ನಲ್ಲಿ ಅವರು ಮಾಡಿದ ಭಾಷಣಗಳಲ್ಲೂ ವ್ಯಕ್ತವಾಗಿದೆ. ಹೀಗಾಗಿ ಭಾರತದಲ್ಲಿ ಮಹಿಳೆಯರ ವಿಮೋಚನೆ ಕುರಿತಂತೆ ಅವರ ದೃಷ್ಟಿಗಳನ್ನು ಹೀಗೆ ಸಂಕ್ಷಿಪ್ತವಾಗಿ ಹೇಳಬಹುದು :

ಅ. ಜಾತಿ ವ್ಯವಸ್ಥೆ ಮಹಿಳೆಯರನ್ನು ಶೋಷಿಸುತ್ತದೆ.

ಆ. ಪಿತೃಪ್ರಧಾನ ವ್ಯವಸ್ಥೆಯೂ ಮಹಿಳೆಯರನ್ನು ಶೋಷಿಸುತ್ತದೆ.

ಜಾತಿ ವ್ಯವಸ್ಥೆ ಶ್ರೇಣೀಕೃತವಾಗಿ ಸಂಘಟಿತವಾಗಿದೆ. ಈ ಶ್ರೇಣೀಕೃತ ವ್ಯವಸ್ಥೆಯಲ್ಲಿ ವಿವಿಧ ವರ್ಗಗಳು ಅಸಮಾನತೆ ಹಾಗೂ

ಭಿನ್ನತೆ ತತ್ವದ ಮೇಲೆ ಸಂಘಟಿತವಾಗಿವೆ. ಹೀಗಾಗಿ ಎಲ್ಲಾ ಮಹಿಳೆಯರ ಶೋಷಣೆ ಏಕರೂಪವಾದುದಲ್ಲ. ಇದು ಜಾತಿಯಿಂದ ಜಾತಿಗೆ ಬೇರೆಯಾಗುತ್ತದೆ. ಈ ಶೋಷಣೆ ಜಾತಿ ಶ್ರೇಣೀಕೃತ ವ್ಯವಸ್ಥೆಯಲ್ಲಿ ಕೆಳಗೆ ಕೆಳಗೆ ಹೋದಂತೆ ತೀವ್ರವಾಗುತ್ತದೆ; ದಲಿತ ಮಹಿಳೆಯ ಶೋಷಣೆ ಮೇಲ್ಜಾತಿ ಮಹಿಳೆಯ ಶೋಷಣೆಗಿಂತ ಸ್ವರೂಪದಲ್ಲಿ ಭಿನ್ನವಾಗಿರುತ್ತದೆ. ಹೀಗಾಗಿ ಫುಲೆ - ಅಂಬೇಡ್ಕರ್ ನಿಲುವಿನಲ್ಲಿ ಎಲ್ಲಾ ಮಹಿಳೆಯರೂ ದಲಿತರೇ ಎಂಬಂತಹ ಪ್ರತಿಪಾದನೆ ಬರೀ ಉತ್ಪ್ರೇಕ್ಷೆ.

**ಜಾತಿ ವ್ಯವಸ್ಥೆ ಹಾಗೂ ಮಹಿಳೆಯರ ಪರಾಧೀನತೆ, ದಾಸ್ಯ**

ಮಹಾಡ್ ಸತ್ಯಾಗ್ರಹದಲ್ಲಿ ಡಾ. ಅಂಬೇಡ್ಕರ್ ಮಾಡಿದ್ದ ಭಾಷಣ ಮುಖ್ಯವಾದುದು. ಇದು ಮಹಿಳಾ ಹೋರಾಟಕ್ಕೆ ದಲಿತ ದೃಷ್ಟಿ ನೀಡುತ್ತದೆ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಮಹಿಳೆಯರ ಪರಾಧೀನತೆಗೆ ಜಾತಿ ವ್ಯವಸ್ಥೆ ಹೇಗೆ ಹೊಣೆ ಎಂಬುದನ್ನು ವಿಶ್ಲೇಷಿಸುತ್ತಾ ಅವರು ಹೇಳುತ್ತಾರೆ, "ಅಸ್ಪೃಶ್ಯತೆಯ ವಿನಾಶದ ಪ್ರಶ್ನೆ ಪುರುಷರಿಗಿಂತ ಮಹಿಳೆಯರಿಗೇ ಮುಖ್ಯವಾದುದು. ನೀವು - ನಾವು ಪುರುಷರಿಗೆ ಜನ್ಮ ನೀಡಿದಿರಿ. ಬೇರೆ ಜನರು ಪ್ರಾಣಿಗಳನ್ನು ಕಾಣುವುದಕ್ಕಿಂತ ಕೀಳಾಗಿ ನಮ್ಮನ್ನು ಕಾಣುತ್ತಾರೆ..... ಕೆಲವು ಸ್ಥಳಗಳಲ್ಲಿ ನಮ್ಮ ನೆರಳು ಸುಳಿಯಲೂ ಬಿಡುವುದಿಲ್ಲ. ಕೆಲವರು ಕಚೇರಿಗಳಲ್ಲಿ, ಸರ್ಕಾರದಲ್ಲಿ ಪ್ರತಿಷ್ಠೆಯ ಸ್ಥಾನ ಪಡೆದುಕೊಳ್ಳುತ್ತಾರೆ, ಆದರೆ ನಿಮಗೆ ಜನಿಸಿದ ನಮಗೆ ಪ್ರತಿಷ್ಠೆಯ ಉದ್ಯೋಗಗಳೇ ಇಲ್ಲ. ಏಕೆಂದರೆ, ನಾವು ಕೀಳು ....... ನಾವು ಈ ಸಭೆಯಲ್ಲಿ ಕುಳಿತಿರುವ ರಾಯಸ್ಥ ಮತ್ತಿತರ ಸವರ್ಣ ಮಹಿಳೆಯರ ಮಕ್ಕಳಿಗಿಂತ ಹೇಗೆ ತಾನೇ ಭಿನ್ನ? ನೀವೂ ಬ್ರಾಹ್ಮಣ ಮಹಿಳೆಯರಷ್ಟೇ ಗುಣಶಾಲಿಗಳು ಎಂಬುದನ್ನು ನೆನಪಿರಬೇಕು. ಹೀಗಿದ್ದೂ ಅವರ ಸಂತತಿ ಎಲ್ಲರಿಗೂ ಅಂಗೀಕಾರಾರ್ಹ. ಆದರೆ ನಿಮಗೆ ಜನಿಸಿದ ಸಂತತಿಯನ್ನೂ ಅವಮಾನ ಗೊಳಿಸುವುದಲ್ಲದೆ ಮಾನವೀಯವಾಗಿರುವ ಮೂಲ ಹಕ್ಕನ್ನೂ ನಿರಾಕರಿಸಲಾಗಿದೆ ಏಕೆ? ಈ ಬಗ್ಗೆ ಎಂದಾದರೂ ನೀವು ಯೋಚಿಸಿದ್ದೀರಾ? ನಿಮ್ಮ ಗರ್ಭದಿಂದಾದ ಜನ್ಮವೇಕೆ ಪಾಪ ಎಂದು ಪರಿಗಣಿತವಾಗಬೇಕು?" (ಬಹಿಷ್ಕೃತ್ ಭಾರತ್, 1928, ಮಹಾಡ್ ಸತ್ಯಾಗ್ರಹ ಪರಿಷತ್‌ನಲ್ಲಿ ಅಂಬೇಡ್ಕರ್‌ರ ಭಾಷಣ).

ವರ್ಗ, ಜಾತಿ ಹಾಗೂ ಪಿತೃಪ್ರಧಾನ ವ್ಯವಸ್ಥೆಗಳ ಪರಾಧೀನತೆಯ ಮುಖಾಂತರ ಭಾರತದಲ್ಲಿ ಮಹಿಳೆಯರ ಪರಾಧೀನತೆ ತೀವ್ರಗೊಂಡಿದೆ. ಭಾರತೀಯ ಸಂದರ್ಭದಲ್ಲಿ ಜಾತಿ ವ್ಯವಸ್ಥೆ ಮಹಿಳೆಯ ಪರಾಧೀನತೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಜಾತಿ ಮೂಲದ ಕ್ರಮ ವಿಭಜನೆ, ಜಾತಿ ಪಂಚಾಯಿತಿ, ಜಾತಿ ಮೂಲದ ವೈಯಕ್ತಿಕ ಕಾನೂನುಗಳು ಮಹಿಳೆಯ ಪರಾಧೀನತೆಗೆ ಕೊಡುಗೆ ಸಲ್ಲಿಸುತ್ತದೆ. ವಿವಾಹ, ವಿವಾಹ ವಿಚ್ಛೇದನ, ಮರುವಿವಾಹ, ಉತ್ತರಾಧಿಕಾರ ಇತ್ಯಾದಿಗಳಲ್ಲಿ ಜಾತಿ ಆಧಾರಿತ ಕಾನೂನುಗಳು ಹಾಗೂ ನಿರ್ಬಂಧಗಳ ಮಹಿಳೆ ಪುರುಷನನ್ನು ಅವಲಂಬಿಸುವಂತೆ ಮಾಡಿ ನಿರ್ಗತಿಕಳನ್ನಾಗಿಸುತ್ತದೆ. ಈ ಜಾತಿಯ ಚೌಕಟ್ಟಿನಲ್ಲೇ, ದಲಿತ ಮತ್ತು ಆದಿವಾಸಿ ಮಹಿಳೆಯರ ಶೋಷಣೆ ಇನ್ನೂ ತೀವ್ರವಾದದ್ದು; ಅವರಲ್ಲಿ ಬಹುತೇಕರು ಭೂ ರಹಿತ ಕೃಷಿ ಕಾರ್ಮಿಕರು, ಬಹುತೇಕ ಈ ಮಹಿಳೆಯರು ಅತ್ಯಾಚಾರ, ಲೈಂಗಿಕ ಆಕ್ರಮಣಗಳಿಗೆ ಬಲಿಯಾಗುತ್ತಾರೆ ಬಿಹಾರ ಹಾಗೂ ಉತ್ತರ ಪ್ರದೇಶದಲ್ಲಿ ದಲಿತ ಮಹಿಳೆಯರ ಅಸಂಖ್ಯ ಸಾಮೂಹಿಕ ಅತ್ಯಾಚಾರ ಪ್ರಕರಣಗಳು ಇದಕ್ಕೆ ಉದಾಹರಣೆ. ಜೊತೆಗೆ ಮೇಲ್ಜಾತಿ ಮತ್ತು ಮಧ್ಯಮ ಜಾತಿ ಪುರುಷರಿಂದ ದಲಿತ ಮಹಿಳೆಯರ ಅತ್ಯಾಚಾರ ಪ್ರಕರಣಗಳನ್ನು ಸರ್ಕಾರವೂ ಗಮನಕ್ಕೆ ತಂದುಕೊಳ್ಳುವುದಿಲ್ಲ. ಇವು ಸಹಜವಾದುದೆಂದೇ ಭಾವಿಸಲಾಗುತ್ತದೆ ಮತ್ತು ಈ ಮಹಿಳೆಯರು ಅತ್ಯಾಚಾರಕ್ಕೆ ಬಲಿಯಾಗುವುದು ಮುಂದುವರಿಯುತ್ತದೆ. ಅತಿ ಶೂದ್ರ ಜಾತಿಯ ಮಹಿಳೆಯರಿಗೆ ಗೌರವವಿಲ್ಲ. ಅವರು ಉನ್ನತ ಶ್ರೇಣಿಯ ವರ್ಣದ ಪುರುಷರ ಭೋಗ ವಸ್ತುಗಳು ಎಂಬುದು ಧರ್ಮಶಾಸ್ತ್ರಗಳಲ್ಲೂ ಇದೆ. ಹೀಗಾಗಿ ದಲಿತ ಮತ್ತು ಆದಿವಾಸಿ ಮಹಿಳೆಯರ ಮೇಲಿನ ದೌರ್ಜನ್ಯದ ಪ್ರಕರಣಗಳನ್ನು ಜಾತಿ ವ್ಯವಸ್ಥೆಯಲ್ಲಿ ಗುರುತಿಸಬೇಕು; ವರ್ಗವ್ಯವಸ್ಥೆಯಲ್ಲಲ್ಲ. (ಶರದ್ ಪಾಟೀಲ್, ಸತ್ಯಶೋಧಕ ಮಾರ್ಕ್ಸ್‌ವಾದೀ, ಜನವರಿ 1983) ಈ ಸಂದರ್ಭದಲ್ಲಿ ಶರದ್ ಪಾಟೀಲರ ಈ ವಿಶ್ಲೇಷಣೆ ಮುಖ್ಯವಾಗುತ್ತದೆ.

ಹೀಗಾಗಿ ಡಾ. ಅಂಬೇಡ್ಕರ್, ಜಾತಿ ವ್ಯವಸ್ಥೆ ಮಹಿಳೆಯರನ್ನು ಶೋಷಿಸುವ ವ್ಯವಸ್ಥೆ ಎಂಬುದನ್ನು ಒತ್ತಿ ಹೇಳುತ್ತಾರೆ. ಇದು ಶ್ರೇಣೀಕೃತ ವ್ಯವಸ್ಥೆಯಾಗಿರುವುದರಿಂದ, ಮಹಿಳೆಯ ಸ್ಥಾನ ಹೆಚ್ಚು ಕೆಳಗೆ ಕೆಳಗೆ ಹೋದಂತೆ, ಆಕೆಯ ಶೋಷಣೆಯೂ ಹೆಚ್ಚು ಹೆಚ್ಚು ತೀವ್ರವಾಗುತ್ತಾ ಹೋಗುತ್ತದೆ. ಸಮಾವೇಶದಲ್ಲಿ ಸೇರಿದ್ದ ದಲಿತ ಮಹಿಳೆಯರಿಗೆ, ಶ್ರೇಣೀಕೃತ ವ್ಯವಸ್ಥೆಯ ಕೆಳಸ್ತರದಲ್ಲಿ ಜನಿಸಿದ್ದರಿಂದ ಒಳಗಾಗುವ ಶೋಷಣೆಯ ಬಗ್ಗೆ ಅರಿವು ಮೂಡಿಸುತ್ತಾರೆ. ಬ್ರಾಹ್ಮಣ ಮಹಿಳೆಯರಿಗಿಂತ ಅವರ ಸ್ಥಾನಮಾನ ಏಕೆ ವಿಭಿನ್ನವಾಗಿದೆ ಎಂದು ಯೋಚಿಸಿ ಎಂದು ಕೇಳುವ ಮುಖಾಂತರ, ಅಸ್ಪೃಶ್ಯತೆ ವಿನಾಶವೇ ಅವರ ಮುಖ್ಯ ಗುರಿಯಾಗಬೇಕು ಎಂಬುದನ್ನೂ ಒತ್ತಿ ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಜಾತಿ ವ್ಯವಸ್ಥೆ ವಿನಾಶದ ಹೋರಾಟಕ್ಕೆ ಕೈ ಜೋಡಿಸಬೇಕೆಂದೂ ಕರೆ ನೀಡುತ್ತಾರೆ. ಈ ಭಾಷಣದ ಮೂಲಕ, ಡಾ. ಅಂಬೇಡ್ಕರ್

1. ತಾವು ಬಂಧಿಗಳಾಗಿರುವ ಜಾತಿ ಸರಪಳಿಯ ಬಗ್ಗೆ ದಲಿತ ಮಹಿಳೆಯರಲ್ಲಿ ಸಂವೇದನೆ ಮೂಡಿಸುತ್ತಾರೆ.
2. ಮಹಿಳೆಯರು ಜಾತಿ ವ್ಯವಸ್ಥೆಯ ಹೆಬ್ಬಾಗಿಲು ಎಂಬುದನ್ನು ಒತ್ತಿ ಹೇಳುತ್ತಾರೆ.
3. ಜಾತಿ ವ್ಯವಸ್ಥೆಯ ಶೋಷಣೆಯ ವಿರುದ್ಧದ ಹೋರಾಟದಲ್ಲಿ ಮಹಿಳೆಯರು ಪ್ರಮುಖ ಪಾತ್ರ ವಹಿಸಬಹುದೆಂದು ಒತ್ತಿ ಹೇಳುತ್ತಾರೆ.
4. ಜಾತಿ ಮೂಲ ವಿಭಿನ್ನತೆಗಳು ಹಾಗೂ ಮಹಿಳೆಯರ ಪರಾಧೀನತೆಯ ವಿಭಿನ್ನ ತೀವ್ರತೆಗಳನ್ನು ವಿವರವಾಗಿ ನಿರೂಪಿಸುತ್ತಾರೆ.

ಈ ರೀತಿ, ಡಾ. ಅಂಬೇಡ್ಕರ್, ಜಾತಿ ವ್ಯವಸ್ಥೆ ಹಾಗೂ ಮಹಿಳೆ ಪರಾಧೀನತೆಯ ಮಧ್ಯೆ ಅಂತರ್ಗತ ಸಂಬಂಧವಿದೆ ಎಂಬುದನ್ನೂ ಸ್ಥಾಪಿಸುತ್ತಾರೆ.

**ಬ್ರಾಹ್ಮಣಿಕೆ ಸಂಸ್ಕೃತಿ : ಮಹಿಳಾ ಪರಾಧೀನತೆಗೆ ಹೊಣೆ**

ಬ್ರಾಹ್ಮಣೇತರ ಪರಂಪರೆಯ ಪ್ರಮುಖ ಚಿಂತಕರಲ್ಲಿ ಒಬ್ಬರಾಗಿರುವ ಅಂಬೇಡ್ಕರ್ ಅವರೇ, ಎಲ್ಲಾ ಭಾರತೀಯ ಇತಿಹಾಸ, ಪರಂಪರೆ, ಧರ್ಮ ಹಾಗೂ ಸಂಸ್ಕೃತಿಯನ್ನು ಬ್ರಾಹ್ಮಣಿಕೆ ಹಾಗೂ ಬ್ರಾಹ್ಮಣೇತರ ಎಂದು ವರ್ಗೀಕರಿಸುತ್ತಾರೆ. ಮಹಿಳಾ ಹೋರಾಟದ ದೃಷ್ಟಿಯನ್ನೂ ಈ ಎರಡು ವರ್ಗಗಳಲ್ಲಿ ವಿಸ್ತೃತವಾಗಿ ವರ್ಗೀಕರಿಸಬಹುದೆಂದೂ ಅವರು ಹೇಳುತ್ತಾರೆ. ಡಾ. ಅಂಬೇಡ್ಕರ್ ಅವರು ವಿರೋಧಿಸಿದ ಬ್ರಾಹ್ಮಣಿಕೆಯ ಸಂಸ್ಕೃತಿ ಮಹಿಳೆಯ ಪರಾಧೀನತೆಯನ್ನು ನ್ಯಾಯಯುತವೆಂದು ಸಮರ್ಥಿಸಿ ಬೆಂಬಲಿಸುತ್ತದೆ. ತಮ್ಮ 'ಹಿಂದೂ ಮಹಿಳೆಯರ ಉನ್ನತಿ ಹಾಗೂ ಅವನತಿ' ಎಂಬ ಕೃತಿಯಲ್ಲಿ ಮಹಿಳೆಯರನ್ನು ದಾಸ್ಯದ ಕತ್ತಲ ಕಣಿವೆಗೆ ತಳ್ಳುವಂತಹ ಬ್ರಾಹ್ಮಣಿಕೆಯ ಸಂಸ್ಕೃತಿ, ಸ್ಮೃತಿಗಳು ಹಾಗೂ ಧಾರ್ಮಿಕ ಶಾಸನಗಳ ವಿವರವಾದ ವಿಶ್ಲೇಷಣೆ ಮಾಡಿದ್ದಾರೆ.

ಪುತ್ರಿಯ ಜನನ, ಪುರಾತನ ಕಾಲದಿಂದಲೂ ಹಿಂದೂ ಕುಟುಂಬದಲ್ಲಿ ದುಃಖದ ಸಂಗತಿಯಾಗಿದೆ ಎಂದು ಅಂಬೇಡ್ಕರ್ ವಾದಿಸುತ್ತಾರೆ. ಬೌದ್ಧ ಪರಂಪರೆ ಈ ಬ್ರಾಹ್ಮಣಿಕೆಯ ಪರಂಪರೆಗೆ ವಿರೋಧವಾಗಿದೆ. ಪುತ್ರಿಯ ಜನನ ದುಃಖದ ಸಂಗತಿ ಎಂದು ಬುದ್ಧ ಎಂದೂ ಭಾವಿಸಲೇ ಇಲ್ಲ. ಈ ವಾದವನ್ನು ಸಮರ್ಥಿಸಲು ಡಾ. ಅಂಬೇಡ್ಕರ್, ರಾಜ ಪ್ರಸಂಜೀತ್ ಮತ್ತು ಬುದ್ಧನ ಮಧ್ಯೆ ನಡೆದ ಸಂವಾದವನ್ನೂ ಬೌದ್ಧ ಸಾಹಿತ್ಯದಿಂದ ಉಲ್ಲೇಖಿಸುತ್ತಾರೆ. ಪುತ್ರಿಯ ಜನನದಿಂದ ನಿರಾಶೆಗೊಂಡಿದ್ದ ರಾಜ ಪ್ರಸಂಜೀತ್‌ಗೆ, ದುಃಖದ ಕಾರಣವನ್ನು ಬುದ್ಧ ಕೇಳುತ್ತಾನೆ. ಕಾರಣ ಕೇಳಿದ ನಂತರ ಬುದ್ಧ ಪ್ರಸಂಜೀತ್‌ಗೆ, ಈ ಬಗ್ಗೆ ಒಂದು ಉಪನ್ಯಾಸವನ್ನೇ ನೀಡುತ್ತಾನೆ. ಪುತ್ರಿಯ ಜನನಕ್ಕೆ ದುಃಖ ಪಡುವ ಅಗತ್ಯವಿಲ್ಲ. ಪುತ್ರಿ ಪುತ್ರನಿಗಿಂತ ಉತ್ತಮ ಸಂತಾನವಾಗಬಹುದು ಎಂದು ಬುದ್ಧ ಪ್ರಸಂಜೀತ್‌ಗೆ ಹೇಳುತ್ತಾನೆ. ನಿನ್ನ ಪುತ್ರಿ ಬುದ್ಧಿವಂತೆ, ಗುಣವಂತೆಯಾಗುತ್ತಾಳೆ ಎಂದೂ ಹೇಳುತ್ತಾನೆ. ಈ ಸಂವಾದದ ಮೂಲಕ, ಬುದ್ಧ ಲಿಂಗ ಭೇದದ ದೃಷ್ಟಿ ಹೊಂದಿರಲಿಲ್ಲ. ಅಲ್ಲದೆ ಹುಡುಗಿಯರೂ ಸಮರ್ಥರು ಹಾಗೂ ಗುಣವಂತರು ಎಂಬ ನಂಬಿಕೆಯನ್ನು ಬುದ್ಧ ಹೊಂದಿದ್ದ ಎಂಬುದನ್ನು ತಿಳಿಸಲು ಅಂಬೇಡ್ಕರ್ ಬಯಸುತ್ತಾರೆ.

ಬ್ರಾಹ್ಮಣಿಕೆ ಸಂಸ್ಕೃತಿ ಮಹಿಳೆಯರಿಗೆ ಜ್ಞಾನದ ಹಕ್ಕು ನಿರಾಕರಿಸುತ್ತದೆ

ಸಂಘದಲ್ಲಿ ಮಹಿಳೆಯರ ಪ್ರವೇಶಕ್ಕೆ ಬುದ್ಧ ಅವಕಾಶ ಕಲ್ಪಿಸಿದ ಎಂಬ ವಿಚಾರವನ್ನು ಡಾ. ಅಂಬೇಡ್ಕರ್ ಒತ್ತಿ ಹೇಳುತ್ತಾರೆ. ಆದರೆ ಹಿಂದೂ ಧರ್ಮ ಮಹಿಳೆಯರಿಗೆ ಜ್ಞಾನದ ಎಲ್ಲಾ ಅವಕಾಶಗಳನ್ನೂ ನಿರಾಕರಿಸಿತು. ವೈರಾಗ್ಯದ ಹಕ್ಕನ್ನೂ ಶೂದ್ರರಿಗೆ ಹಾಗೂ ಮಹಿಳೆಯರಿಗೆ ನಿರಾಕರಿಸಲಾಗಿದೆ. ಇದಕ್ಕೆ ಕಾರಣವನ್ನು ಮನುಶಾಸ್ತ್ರದಲ್ಲಿ ಗುರುತಿಸಬಹುದು. ಇದು ವೇದ ಕಲಿಯಲು ಮಹಿಳೆಯರಿಗೆ ಹಕ್ಕಿಲ್ಲ, ಹೀಗಾಗಿ ಅವರಿಗೆ ನಡೆಸುವ ಸಂಸ್ಕಾರಗಳನ್ನೂ, ವೇದಗಳ ಮಂತ್ರ ಘೋಷವಿಲ್ಲದೇ ನಡೆಸಬೇಕೆಂದು ಹೇಳುತ್ತದೆ. ವೇದ ಧರ್ಮದ ಪ್ರಕಾರ, ವೇದ ಮಂತ್ರಗಳ ಘೋಷ ಪಾಪವನ್ನು ತೊಲಗಿಸುತ್ತದೆ, ಆದರೆ ಮಹಿಳೆಯರಿಗೆ ವೇದ ಓದುವ ಅವಕಾಶ ಇಲ್ಲದ್ದರಿಂದ, ಬ್ರಾಹ್ಮಣಿಕೆಯ ಸಂಸ್ಕೃತಿ ಅವರು ಸತತ ಅಸತ್ಯ ಹಾಗೂ ಪಾಪದ ಸ್ಥಿತಿಯಲ್ಲೇ ಇರುವವರೆಂದು ಭಾವಿಸಿತು. ಡಾ. ಅಂಬೇಡ್ಕರ್ ಇದನ್ನು ಒಪ್ಪುವುದಿಲ್ಲ. ಮನುವಿನ ತತ್ವ ಅವನಿಗಿಂತ ಮುಂಚೆ ಇದ್ದ ಬ್ರಾಹ್ಮಣಿಕೆಯ ಪಠ್ಯಗಳ ಪರಂಪರೆಯಲ್ಲಿದೆ ಎಂದು ಅವರು ವಾದಿಸಿದರು. ಮಹಿಳೆಯರನ್ನು ಕುರಿತ ಈ ಬ್ರಾಹ್ಮಣಿಕೆಯ ಸೂತ್ರಗಳು, ಭಾರತದಲ್ಲಿ ಮಹಿಳೆಯರ ಅವನತಿಗೆ ಕಾರಣವಾಯಿತು ಎಂದು ಅವರು ವಾದಿಸುತ್ತಾರೆ; ಜ್ಞಾನದ ಪ್ರಕ್ರಿಯೆಯಲ್ಲಿ ಭಾಗಿಯಾಗುವುದು ಎಲ್ಲಾ ಮನುಷ್ಯರ ಸಹಜ ಹಕ್ಕು. ಯಾವುದೇ ತಾರ್ಕಿಕ ಕಾರಣ ಇಲ್ಲದೇ ಬ್ರಾಹ್ಮಣರು ಮಹಿಳೆಯರಿಗೆ ಈ ಹಕ್ಕು ನಿರಾಕರಿಸಿದ್ದಾರೆ. ಹೀಗಾಗಿ, ಮಹಿಳೆಯರು ಆಧ್ಯಾತ್ಮಿಕ ಬೆಳವಣಿಗೆ ಹಾಗೂ ಜ್ಞಾನದ ಹಕ್ಕಿನಿಂದ ವಂಚಿತರಾಗಬೇಕಾಯಿತು. ಆಧ್ಯಾತ್ಮಿಕ ಜ್ಞಾನವಿಲ್ಲದ ಪುರುಷ, ಪುರುಷನೆಂಬ ಕಾರಣಕ್ಕಾಗಿಯೇ ದೇವರಿಗೆ ಹತ್ತಿರದವನಾಗುತ್ತಾನೆ ಎಂದು ಬ್ರಾಹ್ಮಣಿಕೆ ಸಂಸ್ಕೃತಿ ನಂಬುತ್ತದೆ. ಏಕೆ ಇದು? ಮಹಿಳೆಯರ ವಿಚಾರದಲ್ಲಿ ಇದು ಏಕೆ ಇಲ್ಲ? ಎಂದು ಅಂಬೇಡ್ಕರ್ ಬ್ರಾಹ್ಮಣಿಕೆಯ ಚಿಂತಕರಿಗೆಲ್ಲಾ ಪ್ರಶ್ನಿಸಿದ್ದಾರೆ.

ಅಂಬೇಡ್ಕರ್ ಪ್ರಕಾರ, ಬ್ರಾಹ್ಮಣಿಕೆಯ ಗುಂಪು, ಜ್ಞಾನದ

ವಲಯದಲ್ಲಿ ಮಹಿಳೆಯರಿಗೆ ಎರಡು ತೀವ್ರ ಅನ್ಯಾಯಗಳನ್ನು ಮಾಡಿತು. ಇದನ್ನು ಬುದ್ಧ ರದ್ದು ಪಡಿಸಿದ. 'ಪರಿವ್ರಾಜ'ಗೆ ಮಹಿಳೆಯರಿಗೆ ಅವಕಾಶ ನೀಡುವ ಮೂಲಕ ಒಮ್ಮೆಲೇ ಬುದ್ಧ ಎರಡು ಬಗೆಯ ಅನ್ಯಾಯಗಳಿಗೆ ಅಂತ್ಯ ಹಾಡಿದ.

1. ಪುರುಷರಂತೆಯೇ ಮಹಿಳೆಯರೂ ಜ್ಞಾನದ ಪ್ರಕ್ರಿಯೆಯಲ್ಲಿ ಭಾಗಿಗಳಾಗಬಹುದು.

2. ಆಧ್ಯಾತ್ಮಿಕ ಜ್ಞಾನದ ಬೆಳಕನ್ನು ಮಹಿಳೆಯರೂ ಅನುಭವಿಸಬಹುದು.

ಹೀಗಾಗಿ, ಬುದ್ಧ, ಭಾರತೀಯ ಮಹಿಳೆಯರನ್ನು ದಾಸ್ಯದಿಂದ ವಿಮುಕ್ತಿಗೊಳಿಸಿ ಅವರ ಬದುಕಿನಲ್ಲಿ ಕ್ರಾಂತಿಕಾರಿ ಬದಲಾವಣೆಗಳನ್ನು ತಂದ ಎಂದೂ ಅಂಬೇಡ್ಕರ್ ಹೇಳುತ್ತಾರೆ.

ಬ್ರಾಹ್ಮಣಿಕೆಯ ಸಂಸ್ಕೃತಿ, ಮಹಿಳೆಯರಿಗೆ ಸ್ವಾತಂತ್ರ್ಯದ ಅವಕಾಶ ನಿರಾಕರಿಸಿತು; ಬುದ್ಧ ಮಹಿಳೆಯರಿಗೆ ಸ್ವಾತಂತ್ರ್ಯ ನೀಡುತ್ತಾನೆ. ಈ ಸ್ವಾತಂತ್ರ್ಯ ಅಂಬೇಡ್ಕರ್ ಪ್ರಕಾರ ಮೇಲು ಮೇಲಿನದಾಗಿರಲಿಲ್ಲ. ಈ ಸ್ವಾತಂತ್ರ್ಯವನ್ನು ಮನ ಸಂತೃಪ್ತಿವರೆಗೆ ಮಹಿಳೆಯರು ಅನುಭವಿಸಬಹುದಿತ್ತು. ಈ ವಾದಕ್ಕೆ ಪೂರಕವಾಗಿ ಭಿಕ್ಷುಣಿಯಾದ ಬ್ರಾಹ್ಮಣ ಮಹಿಳೆ ಮುಕ್ತಾಳ ಸಂಭಾಷಣೆಯನ್ನು ಉಲ್ಲೇಖಿಸುತ್ತಾರೆ, "ಆಹಾ! ನಾನು ನಿಜವಾಗಿಯೂ ಸ್ವತಂತ್ರಳು. ಈ ಸ್ವಾತಂತ್ರ್ಯಕ್ಕೆ ಮಿತಿಯೇ ಇಲ್ಲ" ಎನ್ನುತ್ತಾಳೆ ಮುಕ್ತಾ. ಇದಕ್ಕೆ ಮತ್ತೊಬ್ಬಳು ಭಿಕ್ಷುಣಿಯಾಗಿ ಪರಿವರ್ತಿತಳಾದ ಬ್ರಾಹ್ಮಣ ಮಹಿಳೆ ಉತ್ತರಿಸುತ್ತಾಳೆ. "ಈ ಬಂಡೆಯ ಮೇಲೆ ಪ್ರತಿ ದಿನ ಧ್ಯಾನದಲ್ಲಿ ಕುಳಿತಾಗ, ಸ್ವಾತಂತ್ರ್ಯದ ಉಸಿರು ನನ್ನ ಆಧ್ಯಾತ್ಮಿಕ ಸಮರ್ಪಣೆಯ ಮೇಲೆ ಸರಾಗವಾಗಿ ಪ್ರವಹಿಸುತ್ತದೆ". ಇದನ್ನು ಹೀಗೆ ಉಲ್ಲೇಖಿಸುವ ಮೂಲಕ, ಮಹಿಳೆಯರಿಗೆ ಸಂಘಕ್ಕೆ ಪ್ರವೇಶ ನೀಡುವ ಮೂಲಕ ಬುದ್ಧ ಮಹಿಳಾ ಸ್ವಾತಂತ್ರ್ಯವನ್ನು ಪ್ರಚಾರ ಮಾಡಿದ ಎಂದು ಅಂಬೇಡ್ಕರ್ ವಾದಿಸುತ್ತಾರೆ. ಲಿಂಗತಾರತಮ್ಯದ ಬೇಡಿಗಳನ್ನು ಒಡೆಯುವ ಮೂಲಕ, ಬುದ್ಧ ಮಹಿಳೆಯರಿಗೆ ಉತ್ಕೃಷ್ಟ ಸಾಧನೆಯ ದಾರಿಯನ್ನು ತೆರೆದದ್ದೇ ಅಲ್ಲದೆ, ಪುರುಷರಿಗೆ ಸಮಾನವಾದ ಸ್ಥಾನಮಾನವನ್ನು ಮಹಿಳೆಯರಿಗೆ ನೀಡುವ ಹಾದಿಯನ್ನು ನಿರ್ಮಿಸಿದ.

ಪುರಾತನ ಭಾರತದಲ್ಲಿ ಮಹಿಳೆಯರಿಗೆ ಉನ್ನತ ಸಾಮಾಜಿಕ ಸ್ಥಾನಮಾನ ಇತ್ತು. ರಾಜಕೀಯ ಪ್ರಕ್ರಿಯೆಯಲ್ಲಿ ಮಾತ್ರವಲ್ಲದೆ ಸಾಮಾಜಿಕ ಹಾಗೂ ಬೌದ್ಧಿಕ ವಲಯಗಳಲ್ಲೂ ಮಹಿಳೆಯರು ಮುಂಚೂಣಿಯಲ್ಲಿದ್ದರು ಎಂದೂ ಅವರು ವಾದಿಸುತ್ತಾರೆ. ಮಹಿಳೆಯರಿಗೆ ಉಪನಯನದ ಹಕ್ಕಿತ್ತು. ವೇದ ಮಂತ್ರಗಳನ್ನು ಅವರು ಘೋಷಿಸಬಹುದಿತ್ತು. ಪಾಣಿಯನ್ನು ಉಲ್ಲೇಖಿಸಿ, ವೇದದಲ್ಲಿ ಉನ್ನತ ಸಾಧನೆ ಮಾಡಿದ ಮಹಿಳೆಯರು, ಧರ್ಮ, ತತ್ವಶಾಸ್ತ್ರ, ಬ್ರಹ್ಮಾಂಡದ ಹುಟ್ಟು ಹಾಗೂ ಜ್ಞಾನದ ಅಭಿವೃದ್ಧಿ ಕುರಿತಂತೆ ಪುರುಷರೊಡನೆ ಚರ್ಚೆ ಮಾಡುವ ಮಹಿಳೆಯರನ್ನೂ ಅವರು ಉದಾಹರಿಸುತ್ತಾರೆ. ಜನಕ ಸುಲಭ, ಯಾಜ್ಞವಲ್ಕ್ಯ ಹಾಗೂ ಗಾರ್ಗಿ-ಮೈತ್ರೇಯಿ ಮತ್ತು ಶಂಕರಾಚಾರ್ಯ ಮೈತ್ರೇಯಿಯರ ಚರ್ಚೆಗಳು ಪ್ರಸಿದ್ಧವಾದುದು. ಎಂದರೆ ಮಹಿಳೆಯರು ಯಾವಾಗಲೂ ಶೋಷಿತರಾಗಿರಲಿಲ್ಲ. ಯಶಸ್ಸಿನ ಶಿಖರಗಳನ್ನು ಏರಲು ಸಾಧ್ಯವಿರುವಂತಹ ಕಾಲವೂ ಇತ್ತು. ಬಹುಶಃ ಭಾರತದ ಸಮಾಜದಲ್ಲಿ ಮಾತ್ರ ಮಹಿಳೆಯರು ಇಂತಹ ಉನ್ನತ ಸ್ಥಾನಮಾನ ಅನುಭವಿಸಿರಬೇಕು ಎಂಬ ಅಂಶವನ್ನೂ ಡಾ. ಅಂಬೇಡ್ಕರ್ ಒತ್ತಿ ಹೇಳುತ್ತಾರೆ.

'ದಾಸ-ಶೂದ್ರ ದಾಸ್ಯ' ಮೊದಲ ಸಂಪುಟದಲ್ಲಿ, ಕಾಮ್ರೇಡ್ ಶರದ್ ಪಾಟೀಲ್ ಅವರೂ, ಪುರಾತನ ಸಮಾಜಗಳಲ್ಲಿ ಮಹಿಳೆಯರು ರಾಜಕೀಯ ಆಡಳಿತದಲ್ಲಿ ಮುಂಚೂಣಿಯಲ್ಲಿದ್ದರು ಎಂಬುದನ್ನು ತಿಳಿಸುತ್ತಾರೆ. ಪುರಾತನ ಭಾರತದಲ್ಲಿ ಸರಳ ಆದಿವಾಸಿ ಸಮಾಜಗಳು, ಮಾತೃಪ್ರಧಾನ ಸಮಾಜಗಳಾಗಿದ್ದವು ಎಂಬುದನ್ನೂ ಅವರು ತಿಳಿಸುತ್ತಾರೆ. ಮಹಿಳೆಯರು ಯಾವಾಗಲೂ, ಈಗಾಗಲೇ ಪರಾಧೀನತೆಗೊಳಪಟ್ಟವರು ಎಂಬ ಸ್ತ್ರೀವಾದಿ ಪರಿಕಲ್ಪನೆಯನ್ನು ಕಾಮ್ರೇಡ್ ಶರದ್ ಪಾಟೀಲ್ ಅಲ್ಲಗಳೆಯುತ್ತಾರೆ. ಮಾತೃಪ್ರಧಾನ ಸಮಾಜಗಳು ಲಿಂಗಾಧಾರಿತವಾದದ್ದು. ಈ ಸಮಾಜಗಳಲ್ಲಿ ಮಹಿಳೆಯರಿಗೆ ಭೂಮಿಯಲ್ಲಿ ವಿತರಣೆ, ಆಡಳಿತ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಹಕ್ಕಿತ್ತು. ಬಹುಶಃ ಮಹಿಳೆಯರು ಕಳೆ ಕೃಷಿಯನ್ನು ಕಂಡುಹಿಡಿದಿದ್ದು ಇದಕ್ಕೆ ಕಾರಣವಿರಬೇಕು. ಹೀಗಾಗಿ ಈ ಸಮಾಜಗಳಲ್ಲಿ, ಆಡಳಿತ ಸೂತ್ರ ಮಹಿಳೆಯರ ಕೈಯಲ್ಲಿತ್ತು. ಹೀಗಿದ್ದೂ ಈ ಸಮಾಜಗಳು ಸಮಾನ ಹಕ್ಕುಗಳ ಸಮಾಜವಾಗಿತ್ತು ಎಂದರ್ಥವಲ್ಲ. ಈ ಸಮಾಜಗಳಲ್ಲೂ, ಲಿಂಗಭೇದ ಹಾಗೂ ರಾಜಕೀಯ ಅಸಮಾನತೆಗಳೂ ಇದ್ದವು. ಕಾಮ್ರೇಡ್ ಪಾಟೀಲರ ಈ ಸಿದ್ಧಾಂತ, ಪುರಾತನ ಭಾರತದಲ್ಲಿ ಮಹಿಳೆಯರ ಸ್ಥಾನಮಾನ ಕುರಿತಂತೆ ಅಂಬೇಡ್ಕರ್ ದೃಷ್ಟಿಗಳಿಗೂ ಹೊಂದಿಕೆಯಾಗುತ್ತದೆ. ಮಹಿಳೆಯರ ಈ ಸ್ಥಾನಮಾನ ಮನು ಪೂರ್ವಯುಗಕ್ಕೆ ಸೀಮಿತವಾಗಿತ್ತು ಎಂಬುದನ್ನು ಡಾ. ಅಂಬೇಡ್ಕರ್ ಒತ್ತಿ ಹೇಳುತ್ತಾರೆ.

ಮಹಿಳೆಯರ ಸ್ಥಾನಮಾನ ಕುಂಠಿತಗೊಳ್ಳಲು ಮನುವೇ ಕಾರಣ ಎಂದು ಡಾ. ಅಂಬೇಡ್ಕರ್ ವಾದಿಸುತ್ತಾರೆ. ಇದನ್ನು ಮನುಸ್ಮೃತಿಯ ಉಲ್ಲೇಖಗಳಿಂದಲೇ ಸ್ಪಷ್ಟ ಪಡಿಸುತ್ತಾರೆ. ಉದಾಹರಣೆಗೆ, ಮನುಸ್ಮೃತಿಯ 2-213 ವಿಧಿಯ ಪ್ರಕಾರ, "ಮಹಿಳೆಯ ಬದುಕಿನ ಮುಖ್ಯ ಗುಣವೆಂದರೆ ಪುರುಷನಿಗೆ ಆಮಿಷ

ಒಡ್ಡಿ ಹಾಳುಮಾಡುವುದು". 2-214 ವಿಧಿ ಹೀಗೆ ಹೇಳುತ್ತದೆ - "ಪೆದ್ದ ಪುರುಷರನ್ನೂ ಮಾತ್ರವಲ್ಲ, ಬಹುಶ್ರುತ ಪುರುಷರನ್ನು ಮಹಿಳೆಯರು ದಾರಿ ತಪ್ಪಿಸಿ ಕೋಪ ಮತ್ತು ಕಾಮದ ಆಳುಗಳನ್ನಾಗಿ ಮಾಡಬಲ್ಲರು". 2-215 ವಿಧಿ ಹೀಗೆ ಪ್ರತಿಪಾದಿಸುತ್ತದೆ. "ತಾಯಿ, ತಂಗಿ ಹಾಗೂ ಮಗಳ ಜೊತೆ ಯಾರೂ ಒಂಟಿಯಾಗಿರಬಾರದು, ಏಕೆಂದರೆ ಇಂದ್ರಿಯಗಳು ಮೇಲುಗೈ ಸಾಧಿಸಿ, ಬಹುಶ್ರುತ ಪುರುಷರನ್ನೂ ತಮ್ಮ ಮೇಲುಗೈ ಸಾಧಿಸಿ, ಬಹುಶ್ರುತ ಪುರುಷರನ್ನೂ ತಮ್ಮ ಜಾಲಕ್ಕೆ ಸೆಳೆದುಕೊಳ್ಳಬಹುದು". 9-14ರ ಪ್ರಕಾರ, "ಪುರುಷರ ಸೌಂದರ್ಯವನ್ನು ಮಹಿಳೆಯರು ಪರಿಗಣಿಸುವುದಿಲ್ಲ, ಅವರು ಯಾವುದೇ ಪುರುಷನ ತೋಳುಗಳಿಗೂ ತಮ್ಮನ್ನು ಅರ್ಪಿಸಿಕೊಳ್ಳಬಲ್ಲರು". ಈ ಉದಾಹರಣೆಗಳ ಮೂಲಕ, ಮಹಿಳೆಯರಿಗೆ, ಮನು ನೀಡಿರುವ ಕೀಳು ಸ್ಥಾನವನ್ನು ಡಾ. ಅಂಬೇಡ್ಕರ್ ವಿವರಿಸಲು ಯತ್ನಿಸಿದ್ದಾರೆ.

ಮಹಿಳೆಯರ ಸ್ವಾತಂತ್ರ್ಯಕ್ಕೂ ಮನು ವಿರೋಧವಾಗಿದ್ದಾನೆ. 9.2 ವಿಧಿಯ ಪ್ರಕಾರ "ತಮ್ಮ ಕುಟುಂಬದ ಎಲ್ಲಾ ಮಹಿಳೆಯರ ಮೇಲೆ ಹಗಲು-ರಾತ್ರಿ ಪುರುಷರು ಕಣ್ಣಿಡಬೇಕು". 9.3ರ ಪ್ರಕಾರ "ಮಹಿಳೆಯರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ". 9-6 - "ಎಲ್ಲಾ ಜಾತಿಗಳ ಉನ್ನತ ಕರ್ತವ್ಯವನ್ನೂ ಪರಿಗಣನೆಗೆ ತೆಗೆದುಕೊಂಡಾಗ, ಅತ್ಯಂತ ದುರ್ಬಲ ಪತಿಯಂದಿರೂ ತಂತಮ್ಮ ಪತ್ನಿಯರನ್ನೂ ತಂತಮ್ಮ ಹೆಬ್ಬೆರಳಡಿ ನಿಯಂತ್ರಣದಲ್ಲಿಟ್ಟುಕೊಳ್ಳಬೇಕೆಂಬುದು ಅನಿವಾರ್ಯ".

ಆಸ್ತಿ ಹಾಗೂ ವಿವಾಹ ವಿಚ್ಛೇದನದ ಹಕ್ಕನ್ನು ಮಹಿಳೆಗೆ ನೀಡುವುದಕ್ಕೂ ಮನು ವಿರೋಧಿ. ಆತ ಮಹಿಳೆಯರ ಮೇಲಿನ ದೌರ್ಜನ್ಯವನ್ನು ಸಮರ್ಥಿಸುತ್ತಾನೆ. ಪತಿಯಿಂದ ಬೇರ್ಪಡುವ ಹಕ್ಕನ್ನು ಮಹಿಳೆಗೆ ನಿರಾಕರಿಸಿದ ಕಾನೂನನ್ನು ಆತ ರಚಿಸಿದ್ದಾನೆ. ಹೀಗೆ ಆತ ಮಹಿಳೆಯನ್ನು ಪತಿಗೆ ಕಟ್ಟಿಹಾಕುತ್ತಾನೆ. ಆದರೆ ಪುರುಷನಿಗೆ ಆತ ಬಯಸಿದ ಸ್ವಾತಂತ್ರ್ಯವನ್ನು ನೀಡುತ್ತಾನೆ. ಪುರುಷನಿಗೆ. ಯಾವುದೋ ಚಿಕ್ಕ ಕಾರಣಕ್ಕೂ ಪತ್ನಿಯನ್ನು ವಿಚ್ಛೇದಿಸುವ ಹಕ್ಕಿದೆ. ಸ್ಥಿರಾಸ್ತಿ ಹಕ್ಕಿನ ವಿಷಯಗಳಿಗೆ ಸಂಬಂಧಿಸಿದಂತೆ ಮಹಿಳೆಯ ಸ್ಥಾನಮಾನವನ್ನು ದಾಸಿಗೆ ಸಮನಾಗಿಸಿದ್ದಾನೆ ಹಾಗೂ ವಿಧವೆಯರಿಗೂ ಆಸ್ತಿ ಹಕ್ಕಿಗೆ ಮಾನ್ಯತೆಯನ್ನು ನೀಡಿಲ್ಲ. ಅಂಬೇಡ್ಕರ್ ಇದನ್ನು ಖಂಡಿಸಿದ್ದಾರೆ.

ಮಹಿಳೆಗೆ ಆಸ್ತಿ ಹಕ್ಕು ನಿರಾಕರಿಸಿ ಕೀಳು ಸ್ಥಾನ ನೀಡಿದ ಮನುವಿನ ಶಾಸನ ಬ್ರಾಹ್ಮಣ ಧರ್ಮಕ್ಕೆ ಹೊಂದಿಕೆಯಾಗುವಂತಿದೆ ಎಂದೂ ಡಾ. ಅಂಬೇಡ್ಕರ್ ವಾದಿಸಿದ್ದಾರೆ. "ಬ್ರಾಹ್ಮಣ ಧರ್ಮದ ಉದಯದ ನಂತರ ಮಹಿಳೆಯ ಸ್ಥಾನಮಾನದ ಬಗ್ಗೆ ಬೆಳವಣಿಗೆಯಾದ ಬ್ರಾಹ್ಮಣರ ನಿಲುವನ್ನು ಮನು ಶಾಸನ ಮಾಡಿದ" ಎಂದೂ ಡಾ. ಅಂಬೇಡ್ಕರ್ ಪ್ರತಿಪಾದಿಸಿದ್ದಾರೆ". ಮನುವಿನ ಶಾಸನದಿಂದ ಸಾಮಾಜಿಕ ಆಚರಣೆಗಳು ಧಾರ್ಮಿಕ ಶಾಸನಗಳ ರೂಪ ಪಡೆದು ರಾಜನಿಂದ ಜಾರಿಗೊಳ್ಳುವಂತಾಯಿತು. ಮಹಿಳೆಯರು ಮತ್ತು ಶೂದ್ರರು ಆರ್ಯ (ಬ್ರಾಹ್ಮಣಿಕೆ) ಧರ್ಮದ ಮೂಲ. ಹೀಗಾಗಿ ಎಲ್ಲಾ ಬಗೆಯ ಶಾಸನಗಳನ್ನೂ ಅವರ ಮೇಲೆ ಹೇರಲಾಯಿತು: ಮಿತ್ರ ವಿವಾಹಗಳ ತೀವ್ರ ನಿಷೇಧ ಇಲ್ಲಿ ಮುಖ್ಯವಾದುದು ಎಂದೂ ಅಂಬೇಡ್ಕರ್ ವಿವರಿಸುತ್ತಾರೆ.

ಹೀಗೆ ಮನುವಿನಿಂದ ಮಹಿಳಾ ವರ್ಗದ ಅವನತಿ ಹೇಗಾಯಿತೆಂಬುದನ್ನು ಅಂಬೇಡ್ಕರ್ ವಿವರಿಸುತ್ತಾರೆ. ಬ್ರಾಹ್ಮಣ ಸಂಸ್ಕೃತಿ ಹಾಗೂ ಧರ್ಮ ಹೇಗೆ 'ಮಹಿಳಾ ದ್ವೇಷಿ (misogynistic) ಎಂಬುದನ್ನು ಅವರು ಒತ್ತಿ ಹೇಳುತ್ತಾರೆ. ಇದಕ್ಕೆ ಪ್ರತಿಯಾಗಿ ಬೌದ್ಧ ಧರ್ಮ, ಲಿಂಗ ಭೇದ ನಿರಾಕರಿಸುವ ಮೂಲಕ ಹಾಗೂ ಮಹಿಳೆಗೆ ಜ್ಞಾನ ಮತ್ತು ವಿಮೋಚನೆಯ ಅವಕಾಶ ನೀಡುವ ಮುಖಾಂತರ ಮಹಿಳಾ ಹೋರಾಟದ ಹರಿಕಾರ ಎಂದೂ ಅವರು ವ್ಯಾಖ್ಯಾನಿಸುತ್ತಾರೆ. ಅವರು ಬೌದ್ಧ ಧರ್ಮಕ್ಕೆ ಮತಾಂತರಗೊಂಡಾಗ, ಮಹಿಳೆಗೆ ವಿಮೋಚನಾಕಾರಿಯಾದ ಬೌದ್ಧ ಧರ್ಮದ ಈ ಗುಣಗಳೂ ಅವರ ಮೇಲೆ ಪ್ರಮುಖ ಪ್ರಭಾವ ಬೀರಿವೆ.

**ಮಹಿಳೆಯರ ವಿಮೋಚನೆಗೆ ಹಿಂದೂ ಸಂಹಿತೆ ಮಸೂದೆ (ಹಿಂದೂ ಕೋಡ್ ಬಿಲ್)**

ಮಹಿಳಾ ದ್ವೇಷಿ ಹಾಗೂ ಮಹಿಳೆಯನ್ನು ಭೋಗವಸ್ತು ಮಟ್ಟಕ್ಕಿಳಿಸಿದ ಮನು ಶಾಸನಗಳನ್ನು ಬದಲಿಸಲು ಡಾ. ಅಂಬೇಡ್ಕರ್ ಯತ್ನಿಸಿದರು. ಸ್ವಾತಂತ್ರ್ಯೋತ್ತರ ಅವಧಿಯಲ್ಲಿ, ಭಾರತೀಯ ಸಂವಿಧಾನದ ಶಿಲ್ಪಿಯಾಗಿ, ಮಹಿಳೆಯರಿಗೆ ನ್ಯಾಯ, ಸಮಾನತೆ ಹಾಗೂ ಭದ್ರತೆಯ ಮೂಲ ಹಕ್ಕುಗಳನ್ನು ಅವರು ನೀಡಿದರು. ಆದರೂ ಇದನ್ನೇ ಅಂತ್ಯವಾಗಿ ಅವರು ಪರಿಗಣಿಸಲಿಲ್ಲ ಎಂಬುದನ್ನು ನಾವು ಕಾಣಬೇಕು.

ಮುಖ್ಯವಾಗಿ, ಮನು ಶಾಸನಕ್ಕೆ ಸವಾಲೆಸೆಯಲು ಹಾಗೂ ಬದಲಿಸುವುದಕ್ಕಾಗಿ ಹಾಗೂ ಮಹಿಳೆಯರಿಗೆ ಆಸ್ತಿಯ ಮೂಲ ಹಕ್ಕುಗಳನ್ನು ನೀಡುವುದಕ್ಕಾಗಿ ಡಾ. ಅಂಬೇಡ್ಕರ್ ಅವರು ಹಿಂದೂ ಕೋಡ್ ಬಿಲ್‌ನ ಕರಡು ಸಿದ್ಧಪಡಿಸಿದರು. ಹಿಂದೂ ಕೋಡ್‌ಬಿಲ್ ಮನುವಿನ ಶಾಸನದ ಅಂತ್ಯವನ್ನು ಸೂಚಿಸುತ್ತದೆ. ಅಲ್ಲದೆ ಮಹಿಳೆಯರಿಗೆ ವಿಮೋಚನೆಯ ಸಾಧ್ಯತೆಗಳಿರುವ ಪಠ್ಯವನ್ನೂ ಹೊಂದಿದೆ. ಬಲವಾದ ಸಾಂಕೇತಿಕ ಕ್ರಿಯೆಯಾಗಿ, ಡಾ. ಅಂಬೇಡ್ಕರ್ ಸಾರ್ವಜನಿಕವಾಗಿ ಮನುಸ್ಮೃತಿ ಸುಟ್ಟರು; ಏಕೆಂದರೆ ಈ ಸ್ಮೃತಿಯಲ್ಲೇ ಶೂದ್ರರು ಮತ್ತು ಮಹಿಳೆಯರ ದಾಸ್ಯದ ಸಮರ್ಥನೆಯಿತ್ತು. ಮಹಿಳಾ ಚಳುವಳಿಯ ಕೆಲವು ಕಾರ್ಯಕರ್ತರು

ಇದನ್ನು ಒಪ್ಪುವುದಿಲ್ಲ. ಡಾ. ಅಂಬೇಡ್ಕರ್ ಮನುಸ್ಮೃತಿಯನ್ನು ಮಹಿಳಾ ಹೋರಾಟದ ಬೆಂಬಲಾರ್ಥ ಸುಡಲಿಲ್ಲ, ಬದಲಿಗೆ ಜಾತಿಯ ಹಿನ್ನೆಲೆಯಲ್ಲಿ ಸುಟ್ಟರು ಎಂದು ವಾದಿಸುವವರಿದ್ದಾರೆ. (ಉದಾಹರಣೆಗೆ, ಪುಣೆಯ ಸಮಾಜವಿಜ್ಞಾನ ಇಲಾಖೆ 1994ರಲ್ಲಿ ಏರ್ಪಡಿಸಿದ್ದ 'ದಲಿತ ಮಹಿಳೆ' ವಿಚಾರ ಸಂಕಿರಣದಲ್ಲಿ ಡಾ. ನೀಲಂ ಗೋರ್ಹೆ ಈ ವಾದವನ್ನು ಮಂಡಿಸಿದ್ದರು). ಇಂತಹ ದಿಟ್ಟ ಅಥವಾ ಆಧಾರವಿಲ್ಲದ ಹೇಳಿಕೆಗಳು ಡಾ. ಅಂಬೇಡ್ಕರ್ ಚಿಂತನೆಗೆ ಅನ್ಯಾಯ ಮಾಡುವಂತಹದ್ದು ಅಥವಾ ಇದನ್ನು ಅರ್ಥ ಮಾಡಿಕೊಳ್ಳುವಲ್ಲಿನ ವೈಫಲ್ಯ ಎಂದು ವಾದಿಸಬಹುದು. ಡಾ. ಅಂಬೇಡ್ಕರ್‌ಗೆ, ಜಾತಿ ಹಾಗೂ ಮಹಿಳೆಯ ದಾಸ್ಯದ ವಿಚಾರ ಬೇರ್ಪಡದೆ ಇರುವಂತಹದ್ದು. ಇಲ್ಲಿ ಯಾವುದೇ ಎರಡು ವಿಭಜಿತ ಚಿಂತನೆ ಇಲ್ಲ. ಜಾತಿ ವ್ಯವಸ್ಥೆ ಮಹಿಳೆಯನ್ನು ಶೋಷಿಸುವುದರಿಂದ ಜಾತಿ ವಿನಾಶದ ಹೋರಾಟಕ್ಕೆ ಸೇರಲು ಮಹಿಳೆಯರಿಗೆ ಅವರು ಕರೆ ನೀಡಿದ್ದರು ಎಂಬುದನ್ನೂ ನಾವು ನೆನಪಿಡಬೇಕು. ಡಾ. ಅಂಬೇಡ್ಕರ್‌ರವರಿಗೆ ಮನುಶಾಸನದ ವಿವರವಾದ ವಿಶ್ಲೇಷಣೆ ಹಾಗೂ ಮಹಿಳಾ ಶೋಷಣೆ ಬೌದ್ಧಿಕ ತೀಕ್ಷ್ಣತೆಯಲ್ಲಿನ ಕಸರತ್ತೇನೂ ಆಗಿರಲಿಲ್ಲ.

ಹಿಂದೂ ಕೋಡ್ ಬಿಲ್‌ನಲ್ಲಿ ಮಹಿಳೆಯರೇ ಕೇಂದ್ರಬಿಂದು, ಆಸ್ತಿ, ವಿವಾಹ ಹಾಗೂ ವಿವಾಹ ವಿಚ್ಛೇದನದ ಮೇಲಿನ ಕಾನೂನುಗಳ ಮುಖಾಂತರ ಮಹಿಳೆಯರ ಸ್ಥಾನಮಾನ ಹೆಚ್ಚಿಸಲು ಯತ್ನಿಸಿದರು. ಉದಾಹರಣೆಗೆ, ಈಗಿರುವ ಹಿಂದೂ ಕಾನೂನಿನ ಪ್ರಕಾರ, ಪುರುಷ ಎಷ್ಟು ಬಾರಿ ಬೇಕಾದರೂ ವಿವಾಹ ಮಾಡಿಕೊಳ್ಳಬಹುದು. ಇದು ಅನ್ಯಾಯ. ಇದನ್ನು ಪುರುಷ ಮತ್ತು ಮಹಿಳೆಯರಿಬ್ಬರಿಗೂ ಏಕಪತಿ-ಏಕಪತ್ನಿ ತತ್ವಕ್ಕೆ ಒಲಿಸಬೇಕೆಂದು ಅವರು ವಾದಿಸುತ್ತಾರೆ. ಹಿಂದೂ ಕಾನೂನಿನ ಪ್ರಕಾರ, ವಿವಾಹ ಪವಿತ್ರ ಅನುಬಂಧವಾದ್ದರಿಂದ, ಇದನ್ನು ಒಡೆಯುವುದು ಅಥವಾ ವಿಚ್ಛೇದನ ಸಾಧ್ಯವಿಲ್ಲ. ಇದು ಅನ್ಯಾಯವೆಂದೂ ಇದನ್ನು ತಿದ್ದುಪಡಿ ಮಾಡಲು ಅಂಬೇಡ್ಕರ್ ಬಯಸಿದರು. 1937ರ ಉತ್ತರಾಧಿಕಾರ ಶಾಸನದ ಪ್ರಕಾರ, ಮಹಿಳೆಯರಿಗೆ ಆಸ್ತಿಯಲ್ಲಿ ಸಮಾನ ಹಕ್ಕಿಲ್ಲ. ಡಾ. ಅಂಬೇಡ್ಕರ್ ಇದನ್ನು ತಿದ್ದುಪಡಿ ಮಾಡಲು ಬಯಸಿದರು, ಪುತ್ರಿಯರಿಗೂ ಪುತ್ರರಷ್ಟೇ ಸಮಾನ ಆಸ್ತಿ ಹಂಚಿಕೆಗೆ ಯತ್ನಿಸಿದರು.

ಈಗಿರುವ ಹಿಂದೂ ಕಾನೂನಿನ ಪ್ರಕಾರ, ಮಹಿಳೆಗೆ ವಿವಾಹ ವಿಚ್ಛೇದನದ ಹಕ್ಕಿಲ್ಲ. ಆದರೆ ಪುರುಷನಿಗೆ ಹಲವು ವಿವಾಹಗಳನ್ನು ಮಾಡಿಕೊಳ್ಳುವ ಅಧಿಕಾರವಿದೆ. ಈ ಕಾನೂನುಗಳು ಪಿತೃಪ್ರಧಾನವೆಂದು ಅವರು ಖಂಡಿಸುತ್ತಾರಲ್ಲದೆ ಹಿಂದೂ ಕೋಡ್ ಬಿಲ್ ಮೂಲಕ ಇದನ್ನು ತಿದ್ದುಪಡಿ ಮಾಡಲು ಬಯಸಿದರು. ಭಾರತೀಯ ಮಹಿಳೆಯರ ಹಿತದ ದೃಷ್ಟಿಯಿಂದ ಈ ಮಸೂದೆ ಅಂಗೀಕರಿಸುವುದು ಮುಖ್ಯ ಎಂದೂ ಅವರು ಒತ್ತಿ ಹೇಳಿದರು. ಅವರು ಮತ್ತು ಪಂಡಿತ್ ನೆಹರೂ ಮಧ್ಯೆ ಈ ಬಗ್ಗೆ ನಡೆದ ಪತ್ರ ವ್ಯವಹಾರ ಇದಕ್ಕೆ ವ್ಯಾಪಕ ಸಾಕ್ಷ್ಯ ಒದಗಿಸಿದೆ. ಈ ಮಸೂದೆ ತಮಗೆ ಹೆಚ್ಚಿನ ಪ್ರಾಮುಖ್ಯದ್ದಾಗಿದ್ದು, ವಿರೋಧಿಗಳ ಮನ ಒಲಿಸಲು ಎಲ್ಲಾ ಪ್ರಯತ್ನ ಮಾಡಿ ಮಸೂದೆ ಅಂಗೀಕರಿಸಬೇಕೆಂದೂ ಅವರು ನೆಹರೂಗೆ ಪತ್ರ ಬರೆದು ಮನವಿ ಮಾಡುತ್ತಾರೆ. ಹಿಂದೂ ಕೋಡ್ ಬಿಲ್‌ನ ತಿರುಳು ಮಹಿಳೆಯ ವಿಮೋಚನೆಯೇ. ಈ ದಿಸೆಯಲ್ಲಿ ಡಾ. ಅಂಬೇಡ್ಕರರ ಪ್ರಯತ್ನಗಳು ಸ್ಪಷ್ಟ.

ಜಾತಿ ಪಂಚಾಯಿತಿ ಜಾತಿ ವ್ಯವಸ್ಥೆಯ ಉತ್ಪನ್ನ ಇದು ಮಹಿಳೆಯರನ್ನು ನಿಯಂತ್ರಿಸುವ, ಶೋಷಿಸುವ ವ್ಯವಸ್ಥೆ. ಪಂಚಾಯಿತಿಯ ಕಾನೂನು ಮೌಖಿಕವಾದುದು. ನ್ಯಾಯದ ಆಡಳಿತಗಾರರು 'ಪಂಚ' ಯಾವಾಗಲೂ ಪುರುಷರೇ. ಪಂಚಾಯಿತಿ ಪುರುಷ ಪ್ರಧಾನವಾದದ್ದು. ನ್ಯಾಯವನ್ನು ಇಲ್ಲಿ ಸುಲಭವಾಗಿ ಖರೀದಿಸಿ ಮಾರಬಹುದು. ಹೀಗಿದ್ದೂ ಹಲವು ಸ್ತ್ರೀವಾದಿ ಕಾರ್ಯಕರ್ತರು, ವಿದ್ವಾಂಸರು ಜಾತಿ ಪಂಚಾಯಿತಿಯ ವ್ಯವಸ್ಥೆಯನ್ನೂ ಬೆಂಬಲಿಸಿದ್ದಿದೆ. ಕಾನೂನು ಪ್ರಕ್ರಿಯೆ ಹಣ ಹಾಗೂ ಸಮಯ ತಿನ್ನುತ್ತದೆಯಾದ್ದರಿಂದ ಮಹಿಳೆಯರಿಗೆ ಅದು ತಲುಪುವುದು ಕಷ್ಟ ಎಂದು ಅವರು ಭಾವಿಸುತ್ತಾರೆ. ಅವರು ಅಧಿಕಾರಶಾಹಿ ಅಮಾನವೀಯವಾದದ್ದು, ಭ್ರಷ್ಟವಾದದ್ದು ಎಂದು ವಾದಿಸುತ್ತಾರೆ. ಅಲ್ಲದೆ ದೀರ್ಘಕಾಲದ ನಿರೀಕ್ಷೆಯ ನಂತರ ನ್ಯಾಯವೂ ಸಿಗದೆ ಹೋಗಬಹುದು. ಜೊತೆಗೆ ಜಾತಿ ಪಂಚಾಯಿತಿಗಳಿಗೆ ಹೆಚ್ಚಿನ ಸಮಯ ಹಿಡಿಯುವುದಿಲ್ಲ, ಸುಲಭವಾಗಿ ತಲುಪುವಂತಹದ್ದು ಹಾಗೂ ಶೀಘ್ರ ಕಾಲದ ಚೌಕಟ್ಟಿನಲ್ಲಿ 'ನ್ಯಾಯ' ನೀಡುವಂತಹದ್ದು ಎಂದು ನೋಡಲಾಗುತ್ತದೆ. ಉದಾಹರಣೆಗೆ, ಕಾರ್ಯಕರ್ತೆ ಹಾಗೂ ಬಹುಜನ ಮಹಿಳಾ ಅಗಾಢಿಯ ಸಂಶೋಧಕಿ ರೇಖಾ ಠಾಕೂರ್ ಪ್ರಕಾರ 'ಬಹುಜನ್ ಮಹಿಳೆ ಮನೆ ಒಳಗಿಂತ ಹೊರಗೆ ಹೆಚ್ಚು ಶೋಷಿತಳು. ಆಕೆಯ ಬದುಕು ನಿಯಂತ್ರಿಸುವ ವಿಧಾನಗಳು ಕುಟುಂಬದ ಹೊರಗಿವೆ. ಕುಟುಂಬದೊಳಗೆ, ಮೇಲ್ಜಾತಿ ಹೆಂಗಸಿಗಿಂತ ಆಕೆ ಹೆಚ್ಚು ಸ್ವತಂತ್ರಳು. ಪಾವಿತ್ರ್ಯದ ಹೊರೆ ಆಕೆಯ ಹೆಗಲ ಮೇಲೆ ಇಲ್ಲದಿರುವುದರಿಂದ ಪತಿಯಿಂದ ಬೇರ್ಪಡಿಕೆಗೆ ಹಾಗೂ ಪುನರ್ವಿವಾಹಕ್ಕೆ ಅವಕಾಶವಿದೆ. ಕುಟುಂಬದೊಳಗಿನ ಅಶಾಂತಿಯನ್ನು ಮನೆ ಹೊರಗೂ ಹೇಳಿಕೊಳ್ಳುವ ಅವಕಾಶ ಆಕೆಗಿದೆ. ಇಲ್ಲಿ ಜಾತಿ ಪಂಚಾಯಿತಿ ನ್ಯಾಯ ನೀಡಿಕೆಯ ಸಂಸ್ಥೆಯಾಗಿ ನ್ಯಾಯ ನೀಡುವಂತಹದಾಗಿತ್ತು. ಹೀಗಾಗಿ, ವಿವಾಹ

ವಿಚ್ಛೇದನಕ್ಕೆ ಶಾಸನಾತ್ಮಕ ಹಕ್ಕು ಆಕೆಗೇನೂ ಹೆಚ್ಚಿನದನ್ನು ನೀಡಿಲ್ಲ; ಪಾರಂಪರಿಕವಾಗಿಯೇ ಈ ಹಕ್ಕು ಆಕೆಗೆ ಲಭ್ಯವಿದೆ. [ರೇಖಾ ಠಾಕೂರ್‌ರ 'ಸಮಾನ ನಾಗರಿಕ ಕಯದ್ಯಲ ತತ್ವತಾ ವಿರೋಧಿ ಹವಾ! - ಏಕರೂಪ ನಾಗರಿಕ ಸಂಹಿತೆಯನ್ನು ವಿರೋಧಿಸಬೇಕು! - ಅಪ್ರಕಟಿತ)

ಡಾ. ಅಂಬೇಡ್ಕರ್ ಅವರು ಸಚಿವ ಸಂಪುಟದ ಭಾಗವಾಗಲು ಮುಖ್ಯ ಕಾರಣ - ಹಿಂದೂ ಕೋಡ್ ಬಿಲ್ ಅಂಗೀಕರಿಸಿಕೊಳ್ಳುವುದು. ಸರ್ಕಾರ ಈ ವಿಚಾರವನ್ನು ಮುಂದೂಡುತ್ತಿದೆ ಎಂದು ಅರ್ಥವಾದ ತಕ್ಷಣ, ಸಚಿವ ಸಂಪುಟಕ್ಕೆ ರಾಜೀನಾಮೆ ನೀಡಿದರು. ತಮ್ಮ ರಾಜೀನಾಮೆಗೆ ನೀಡಿದ ಸ್ಪಷ್ಟೀಕರಣದಲ್ಲಿ, ಹಿಂದೂ ಕೋಡ್ ಬಿಲ್‌ಗಾಗಿಯೇ ಸಚಿವ ಸಂಪುಟ ಸೇರಿದುದಾಗಿಯೂ, ಈ ಹಿನ್ನೆಲೆಯಲ್ಲಿ ತಮಗೆ ಕಿರುಕುಳ ನೀಡಲಾಯಿತೆಂದೂ ಅವರು ಹೇಳುತ್ತಾರೆ. ಸಂವಿಧಾನಾತ್ಮಕ ಸಮಿತಿಗೆ ಸೇರಿಕೊಳ್ಳುವ ವಿಚಾರದಲ್ಲಿನ ರಾಜಿ, ಬಿಲ್‌ನ ಹಿತಕ್ಕೆ ಅನುಗುಣವಾಗಿತ್ತು. ಏಕೆಂದರೆ, ಮಹಿಳೆಯರು ಈಗಿರುವ ಪಿತೃಪ್ರಧಾನ ಬ್ರಾಹ್ಮಣಿಕೆಯ ಶಾಸನ ಹಾಗೂ ಜಾತಿ ಪಂಚಾಯಿತಿಯ ಮೌಖಿಕ ಶಾಸನದಿಂದ ವಿಮೋಚನೆಗೊಳ್ಳಬೇಕು ಎಂದು ಅವರು ದೃಢವಾಗಿ ನಂಬಿದ್ದರು. ಹೊಸದಾಗಿ ಉದಯವಾಗುವ ರಾಷ್ಟ್ರದ ಬದುಕಿನಲ್ಲಿ ಈ ಮಸೂದೆ ಮುಖ್ಯ ಘಟನೆ ಎಂದು ತಾವು ಭಾವಿಸುವುದಾಗಿಯೂ ಆದರೆ, ಇದನ್ನು ಯಾವುದೇ ಪ್ರಮುಖ ಸಮ್ಮೇಳನಗಳಲ್ಲಿ ಕೈಗೆತ್ತಿಕೊಳ್ಳಲಿಲ್ಲ ಎಂದೂ ಅವರು ಹೇಳಿದ್ದರು. ಬಹುಶಃ ಸಂಸತ್ತಿನ ಮುಂದೆ ಬರುವ ಏಕೈಕ ಪ್ರಮುಖ ಕಾನೂನಾಗಿ ಹಿಂದೂ ಕೋಡ್ ಬಿಲ್ ಉಳಿಯುತ್ತದೆ. ಭಾರತೀಯ ಸಮಾಜದಲ್ಲಿ ಬೇರು ಬಿಟ್ಟಿರುವ ಶ್ರೇಣೀಕೃತ ವ್ಯವಸ್ಥೆ ಹಾಗೂ ಲಿಂಗಭೇದ ಸಮಸ್ಯೆ ಗುರುತಿಸದೆ ಆರ್ಥಿಕ ಪರಿಸ್ಥಿತಿ ಸುಧಾರಣೆಗೆ ಮಾತ್ರ ಯತ್ನಿಸುವಂತಹದ್ದು. ಗಾಳಿಯಲ್ಲಿ ಗೋಪುರ ಕಟ್ಟಿದಂತೆ ಎಂದೂ ಅವರು ಭಾವಿಸುತ್ತಾರೆ. ಪಿತೃಪ್ರಧಾನ ಊಳಿಗಮಾನ್ಯ ಸಮಾಜದಲ್ಲಿ, ಮಹಿಳೆಯರು ಜಾತಿ ಆಧಾರಿತ ವಿವಾಹ ಶಾಸನಗಳು, ವಿವಾಹ ವಿಚ್ಛೇದನ ಹಾಗೂ ಉತ್ತರಾಧಿಕಾರದ ಸುಳಿಯಲ್ಲಿ ಸಿಲುಕಿ ಹೋಗಿದ್ದರು. ವಸಾಹತು ಆಳ್ವಿಕೆ, ಹೊಸ ವರ್ಗಗಳ ಉದಯಕ್ಕೆ ಕಾರಣವಾಗಿತ್ತು. ಅಲ್ಲದೆ ಹೊಸ ಜಾತಿ ವರ್ಗದ ಸಮಾಜವೂ ಉದಯವಾಗಿತ್ತು. ಮಹಿಳೆಗೆ ಶಿಕ್ಷಣ, ಸಾಮಾಜಿಕ ಉತ್ಪಾದನೆಯಲ್ಲಿ ಪಾಲ್ಗೊಳ್ಳುವಿಕೆ, ವೈವಾಹಿಕ ಹಕ್ಕುಗಳ ಬಗ್ಗೆ ಗಮನ, ಮಹಿಳೆಗೆ ಉತ್ತಮ ಸ್ಥಾನಮಾನ - ಇವು ಈ ಹೊಸ ಸಮಾಜದ ಬೇಡಿಕೆಗಳಾಗಿ ಉದಯಿಸಿದವು. ಹೀಗಾಗಿ, ಡಾ. ಅಂಬೇಡ್ಕರ್‌ರ ಚಾರಿತ್ರಿಕ ಕೊಡುಗೆ - ಈ ಹೊಸ ಬೇಡಿಕೆಗಳ ಈಡೇರಿಕೆಗೆ ಮೂಲ ಅಗತ್ಯವಾಗಿ ಹಿಂದೂ ಕೋಡ್ ಬಿಲ್ ಅಂಗೀಕಾರಕ್ಕೆ ನಡೆಸಿದ ಸತತ ಪ್ರಯತ್ನದಲ್ಲಿದೆ. ಒಂದು ರೀತಿಯಲ್ಲಿ ಇದು ಜಾತಿ ಮೂಲದ ಪಿತೃಪ್ರಧಾನ ಕಾನೂನಿನಿಂದ ವ್ಯಕ್ತಿಗತ ಹಾಗೂ ವರ್ಗ ಆಧಾರಿತ ಸಾಮಾಜಿಕ ಕಾನೂನಿಗೆ ಸಾಗಿದ ಪಯಣವಾಗಿತ್ತು. ('ಮೀ ಮಂತ್ರಿಪದಚ ರಾಜೀನಾಮ ಕಾ ದಿಲಾ?' - ನಾನು ಮಂತ್ರಿ ಪದವಿಗೆ ಏಕೆ ರಾಜೀನಾಮೆ ಇತ್ತೆ - ಸಂ. : ಭಾ. ಡಿ. ಫಡ್ಕೆ, ಅಂಬೇಡ್ಕರಂಚೆ ಸಮಾಜ ಚಿಂತನದಿಂದ - ಉದ್ಧೃತ).

ಡಾ. ಅಂಬೇಡ್ಕರ್‌ರ ಈ ಬರೆಹಗಳಲ್ಲಿ, ಮಹಿಳಾ ಹೋರಾಟದ ಬಗ್ಗೆ ಬ್ರಾಹ್ಮಣೇತರ ದೃಷ್ಟಿ ಎಂದು ಅವರು ರೂಪಿಸಿದ ಚಿಂತನೆಯ ಧಾಟಿಯನ್ನು ಗುರುತಿಸಬಹುದು. ಇಂತಹ ದೃಷ್ಟಿ ಬರೀ ಆರ್ಥಿಕ ಸ್ಥಾನಮಾನ ಸುಧಾರಣೆಗೆ ಗಮನ ನೀಡುವುದಿಲ್ಲ; ಆದರೆ ಜಾತಿ ವಿನಾಶ ಹಾಗೂ ಮಹಿಳೆಯರ ಪರಾಧೀನತೆಯ ವಿರುದ್ಧದ ಕ್ರಾಂತಿಕಾರಿ ಕಾರ್ಯಕ್ರಮಕ್ಕೂ ಪ್ರಾಮುಖ್ಯ ನೀಡುತ್ತದೆ. ಬಹಳ ಸಲ ಅವರ ಹಿಂದೂ ಕೋಡ್ ಬಿಲ್ ನಿರೂಪಣೆಯನ್ನು ಅವರ ಮಹಿಳಾ ಹೋರಾಟದ ಪ್ರಣಾಳಿಕೆಯಾಗಿ ತಪ್ಪಾಗಿ ಗ್ರಹಿಸಲಾಗಿದೆ. ಪ್ರಾಮುಖ್ಯತೆ ದೃಷ್ಟಿಯಿಂದ ಇತರ ಮಸೂದೆಗಳ ಜೊತೆ ಹೋಲಿಸಲಾಗದು ಎಂದು ಅವರು ಉಲ್ಲೇಖಿಸಿದರೂ, ಈ ಮಸೂದೆಯನ್ನೇ ಅವರು ಅಂತ್ಯವೆಂದು ಭಾವಿಸಲಿಲ್ಲ. ಆರಂಭವೆಂದು ಗ್ರಹಿಸಿದರು. ಅವರು ರಾಜಿ ಮಾಡಿಕೊಂಡು ಸಚಿವ ಸಂಪುಟ ಸೇರಿದರು. ಏಕೆಂದರೆ, ಆಸ್ತಿ ಸ್ವಾತಂತ್ರ್ಯ ನೀಡಿಕೆ, ಎಷ್ಟೇ ಸೀಮಿತ ಆದುದಾದರೂ ಮಹಿಳಾ ವಿಮೋಚನೆಯ ಆರಂಭವಾಗಿ ಪರಿಗಣಿಸಿದ್ದರು' ಎಂದರೆ ಮಹಿಳಾ ಹೋರಾಟದ ಬಗ್ಗೆ ಅವರ ದೃಷ್ಟಿಗಳು ಬರೀ ಆರ್ಥಿಕ ಸ್ವಾತಂತ್ರ್ಯಕ್ಕಷ್ಟೇ ಸೀಮಿತವಾಗಿತ್ತು ಎಂಬುದು ಇದರ ಅರ್ಥವಲ್ಲ. ಜಾತಿ ವ್ಯವಸ್ಥೆ ಹಾಗೂ ಮಹಿಳೆಯರ ಪರಾಧೀನತೆಯ ಸಂಬಂಧದ ಬಗ್ಗೆ ಅವರ ಒಳನೋಟಗಳನ್ನು, ತಮ್ಮ ಬರಹ ಹಾಗೂ ಭಾಷಣಗಳ ಮೂಲಕ ಪಿತೃಪ್ರಧಾನ ವ್ಯವಸ್ಥೆ ಬಗ್ಗೆ ಅವರ ಸತತ ಟೀಕೆಗಳನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಹೀಗಾಗಿ ಮಸೂದೆಯಿಂದ ಮನುವಿನ ಅಸ್ತಿತ್ವದಲ್ಲಾಗುವ ಶಾಸನಕ್ಕೆ ಪ್ರತಿಯಾಗಿ ಕ್ರಾಂತಿಕಾರಿ ನಿಲುವನ್ನು ಮಂಡಿಸಿದಂತಾಗುತ್ತದೆ. ಮಹಿಳಾ ಪ್ರಶ್ನೆಗೆ ಸಂಬಂಧಿಸಿದಂತೆ ಅವರು ರಾಜೀನಾಮೆ ನೀಡುವ ಧೈರ್ಯ ತೋರಿದರೆಂಬುದು, ಭಾರತದಲ್ಲಿ ಮಹಿಳಾ ಹೋರಾಟದ ನಾಯಕರಲ್ಲಿಯೇ ಸಮಾನಾಂತರವಿಲ್ಲದ ಕ್ರಿಯೆ ಎನಿಸಬಹುದು. ಹೀಗಾಗಿ, ಮಹಿಳಾ ಪ್ರಶ್ನೆಯ ಇಕ್ಕಟ್ಟಿನ ಹಾದಿಯಿಂದ ಹೊರಗೆ ಹೋಗುವ ಹಾದಿಯಾಗಿ ಹಿಂದೂ ಕೋಡ್ ಬಿಲ್ ಅನ್ನು ಅಂಬೇಡ್ಕರ್ ರೂಪಿಸಿದರು; ಇದನ್ನು ಭಾರತದಲ್ಲಿ ಮಹಿಳಾ ಹೋರಾಟದ ಪ್ರಣಾಳಿಕೆ ಎಂದು ಅವರೆಂದೂ ಭಾವಿಸಲಿಲ್ಲ.

ಕಾನೂನು ಸಚಿವರಾಗಿ ನೀಡಿದ ರಾಜೀನಾಮೆ ಪತ್ರದಲ್ಲೂ, ಇತರ ಎರಡು ಅಸ್ತಿತ್ವದಲ್ಲಿರುವ ಕಾನೂನುಗಳಿಗಿಂತ ಹೆಚ್ಚು ಪ್ರಗತಿಪರವಾದ ಕಾನೂನು ಮಂಡಿಸಿದುದಾಗಿಯೂ ಅವರು ಹೇಳುತ್ತಾರೆ.

ಹಿಂದೂ ಕೋಡ್ ಬಿಲ್‌ಗೆ ಹಲವು ದೃಷ್ಟಿಕೋನಗಳು ವ್ಯಕ್ತವಾಗಿವೆ. ಇದರ ಮೂಲಕ ಮಹಿಳಾ ಹೋರಾಟದ ಪ್ರಣಾಳಿಕೆ ಮಂಡಿಸಲಾಯಿತು ಎಂದು ಕೆಲವರು ಭಾವಿಸಿದರೆ, ಮತ್ತೆ ಕೆಲವರು ಇದನ್ನು ನಿಜವಾಗಿ ಡಾ. ಅಂಬೇಡ್ಕರ್ ಸಿದ್ಧಪಡಿಸಿದ್ದಲ್ಲ; ಧಾರ್ಮಿಕ ಪಠ್ಯಗಳು ಹಾಗೂ ಸಂಸ್ಕೃತ ಪಂಡಿತರ ಜೊತೆಗಿನ ಸಮಾಲೋಚನೆ ಆಧಾರದ ಮೇಲೆ ಕಾನೂನುಗಳನ್ನು ಮಾಡುವಂತಹ ವಸಾಹತು ಪ್ರಕ್ರಿಯೆಯ ಕ್ರೋಢೀಕೃತ ನಿಯಮಗಳನ್ನು ಇದು ಸಂಕೇತಿಸುತ್ತದೆ ಎಂದೂ ಭಾವಿಸುತ್ತಾರೆ. ಮಧು ಕಿಶ್ವರ್ ಮತ್ತು ರೇಖಾ ಠಾಕೂರ್‌ರ ದೃಷ್ಟಿಗಳು ಎರಡನೆಯದರ ನಿಲುವಿಗೆ ಅಂಟಿಕೊಳ್ಳುತ್ತದೆ. ಡಾ. ಅಂಬೇಡ್ಕರ್ ಅವರು ಹಿಂದೂ ಕೋಡ್ ಬಿಲ್ ರೂಪಿಸಿದರು ಎಂದು ಗಮನಿಸುವಲ್ಲಿ, 1925ರಿಂದಲೇ ಇದೇ ಬೇಡಿಕೆಗಾಗಿ ಎ.ಐ.ಡಬ್ಲ್ಯು.ಸಿ. ಲಾಬಿ ನಡೆಸಿತ್ತು ಎಂಬ ಅಂಶವನ್ನು ನಾವು ಮರೆಯುತ್ತೇವೆ ಎಂದು ಗೇಲ್ ಓಮ್‌ವೆಟ್ ವಾದಿಸುತ್ತಾರೆ. ಮಸೂದೆ ಸೃಷ್ಟಿ ಹಾಗೂ ಅದಕ್ಕೆ ಬದಲಾವಣೆಗಳನ್ನು ಸೂಚಿಸಿದವರ ಮಧ್ಯದ ತಪ್ಪಾದ ಹೋಲಿಕೆಯಿಂದ ಇಂತಹ ಟೀಕೆಗಳು ಸೃಷ್ಟಿಯಾಗುತ್ತದೆ. ಇದಲ್ಲದೆ, ಡಾ. ಅಂಬೇಡ್ಕರ್ ಮತ್ತು ಎ.ಐ.ಡಬ್ಲ್ಯು.ಸಿ. ನಿಲುವಿನ ಮಧ್ಯೆ ಮೂಲಭೂತ ವ್ಯತ್ಯಾಸಗಳಿವೆ; ಡಾ. ಅಂಬೇಡ್ಕರ್‌ಗೆ ಈ ಮಸೂದೆ ಮಹಿಳೆಯ ಆಲೋಚನೆಯ ವಿಸ್ತೃತ ಕಾರ್ಯಕ್ರಮದಲ್ಲಿ ಪ್ರಗತಿಪರ ಹೆಜ್ಜೆಯಾಗಿತ್ತು. ಎ.ಐ.ಡಬ್ಲ್ಯು.ಸಿಗೆ ಇದು ರಾಜಕೀಯ ತಂತ್ರದ ವಿಷಯವಾಗಿತ್ತು. ಸಂಸತ್ತಿನಲ್ಲಿ ಅಂಬೇಡ್ಕರ್ ಇದನ್ನು ಮಂಡಿಸಿದಾಗ ಅವರು ಬೆಂಬಲಿಸಲೂ ಇಲ್ಲ. ಅಥವಾ ಮಸೂದೆಗೆ ವಿರೋಧವಾಗಿ ಜನಸಂಘ ಮಹಿಳೆಯರು ನಡೆಸಿದ ಮೋರ್ಚಾವನ್ನು ಅವರು ಖಂಡಿಸಲೂ ಇಲ್ಲ ಎಂಬ ಅಂಶದಿಂದ ಇದು ಸ್ಪಷ್ಟ. ಹೀಗಿದ್ದಾಗ ಯಾವ ಕಾರಣಕ್ಕಾಗಿ, ಈ ಬೇಡಿಕೆಯನ್ನು ಎ.ಐ.ಡಬ್ಲ್ಯು.ಸಿ. ಕೈಗೆತ್ತಿಕೊಂಡಿತ್ತು ಎಂದು ನಾವು ವೈಭವೀಕರಿಸಬೇಕು? ಮಸೂದೆಗೆ ಅಂಬೇಡ್ಕರ್ ಕೊಡುಗೆ ಹಾಗೂ ಎ.ಐ.ಡಬ್ಲ್ಯು.ಸಿ. ವಿಚಾರಗಳನ್ನು ಒಟ್ಟುಗೂಡಿಸುವುದೇ ಆಶ್ಚರ್ಯಕರವಾದದ್ದು.

**ಮಹಿಳೆಯರ ವಿಮೋಚನೆಯ ಹೋರಾಟಕ್ಕೆ ದೃಷ್ಟಿಕೋನ ಮತ್ತು ಕಾರ್ಯಕ್ರಮ**

ಅಸಮಾನತೆಯ ಮುಂದುವರಿಕೆಗಾಗಿ ಜಾತಿಗಳನ್ನು ಸೃಷ್ಟಿಸಲಾಯಿತು ಎಂದು ವಾದಿಸುತ್ತಾ ಅಂಬೇಡ್ಕರ್ ಅವರು, ಶ್ರೇಣೀಕೃತ ಜಾತಿ ವ್ಯವಸ್ಥೆಯೊಳಗೇ ಎಲ್ಲಾ ಜಾತಿಯವರೂ ತಮ್ಮ ಅಸ್ತಿತ್ವದ ಬಗ್ಗೆ ಹೆಮ್ಮೆ ತಾಳುತ್ತಾರೆ ಎಂದು ಹೇಳುತ್ತಾರೆ. ಪ್ರತಿ ಜಾತಿಯೂ ತನ್ನ ವಿಭಿನ್ನತೆ, ತನ್ನದೇ ಅಸ್ತಿತ್ವ ಕಾಯ್ದುಕೊಳ್ಳುವಲ್ಲಿ ಕ್ರಿಯಾಶೀಲವಾಗಿರುತ್ತದೆ. ಊಟ ಹಾಗೂ ವಿವಾಹ ಸಂಬಂಧವನ್ನು ಜಾತಿವಲಯಕ್ಕೆ ಸೀಮಿತಗೊಳಿಸಿಕೊಳ್ಳುವುದಷ್ಟೇ ಅಲ್ಲ, ಪ್ರತಿ ಜಾತಿಯವರೂ ಆ ಜಾತಿಯ ಅಸ್ತಿತ್ವ ಸಂಕೇತಿಸುವಂತಹ ವೇಷಭೂಷಣಗಳನ್ನು ತೊಡುತ್ತಾರೆ. ಆಹಾರಾಭ್ಯಾಸ, ವಿವಾಹ ವಿಧಿಗಳು, ವೇಷಭೂಷಣಗಳನ್ನೆಲ್ಲಾ ಜಾತಿ ವ್ಯವಸ್ಥೆ ನಿಯಂತ್ರಿಸುತ್ತದೆ. ಇದು ಸವರ್ಣೀಯ ಹಾಗೂ ಅಸ್ಪೃಶ್ಯನ ವ್ಯತ್ಯಾಸವನ್ನು ಸಾರಿ ಹೇಳುತ್ತದೆ. ಆಹಾರ, ವಿವಾಹ ವಿಧಿ ಜಾತಿಯ ಒಳಗಿನ ವಿಚಾರ. ಆದರೆ ವೇಷಭೂಷಣ ವಿಚಾರವನ್ನು ಡಾ. ಅಂಬೇಡ್ಕರ್ ವಿವರವಾಗಿ ಚರ್ಚಿಸಿದ್ದಾರೆ. ವೇಷಭೂಷಣ ಅಸ್ಪೃಶ್ಯನಿಗೇ ಬೇರೆ. ಹೀಗಾಗಿ ಜಾತಿ ವ್ಯವಸ್ಥೆ ಸೂಚಿಸುವಂತಹ ವೇಷಭೂಷಣ ತೊರೆಯಬೇಕೆಂದು ಡಾ. ಅಂಬೇಡ್ಕರ್ ಜನರಿಗೆ ಮನವಿ ಮಾಡುತ್ತಾರೆ. ವೇಷಭೂಷಣ ಕುರಿತ ತಮ್ಮ ಉಪನ್ಯಾಸದಲ್ಲಿ ಅಸ್ಪೃಶ್ಯನ ಅಸ್ತಿತ್ವ ಅಳಿಸಿಹಾಕಲು ಹಾಗೂ ಆತ್ಮಗೌರವದ ಬದುಕು ಬದುಕಲು ಜಾತಿ ಆಧಾರಿತ ವೇಷಭೂಷಣಗಳನ್ನು ತೊರೆಯಬೇಕೆಂದೂ ಅವರು ಕರೆ ನೀಡುತ್ತಾರೆ.

ಅಸ್ಪೃಶ್ಯ ಮಹಿಳೆಯರನ್ನು ಅವರ ವೇಷಭೂಷಣದಿಂದಲೇ ಕೀಳೆಂದು ಭಾವಿಸಲಾಗಿದೆ. ಬ್ರಾಹ್ಮಣಿಕೆಯ ಪರಂಪರೆ, ಅವರ ಮೇಲೆ ಮೊಣಕಾಲಿನ ಮೇಲೆ ಸೀರೆ, ಭಾರ ಹಾಗೂ ಅಗ್ಗದ ಆಭರಣಗಳನ್ನು ಅವರ ಮೇಲೆ ಹೇರಿ ಅವರು ಅಸ್ಪೃಶ್ಯರೆಂಬುದನ್ನು ಗುರುತಿಸುತ್ತದೆ. ಈ ಮಹಿಳೆಯರನ್ನು ದಾಸ್ಯದಲ್ಲಿಡುವುದಕ್ಕಾಗಿಯೇ ಈ ಪರಂಪರೆಗಳನ್ನು ವಿನ್ಯಾಸಗೊಳಿಸಲಾಗಿದೆ. ಹೀಗಾಗಿ ಈ ದಾಸ್ಯದ ಸಂಕೇತಗಳನ್ನು ಕಿತ್ತೊಗೆಯಬೇಕೆಂದು ಅವರು ಮನವಿ ಮಾಡುತ್ತಾರೆ. ಮಹಾಡ್ ಸತ್ಯಾಗ್ರಹ ಪರಿಷತ್‌ನಲ್ಲಿ ಭಾಷಣ ಮಾಡುವಾಗ, "ಹಳೆಯ ಮತ್ತು ಕೊಳಕಾದ ಪರಂಪರೆಗಳನ್ನು ಅನುಸರಿಸುವುದಿಲ್ಲ ಎಂದು ನೀವು ಪ್ರತಿಜ್ಞೆ ಮಾಡಬೇಕು. ನಿಜ ಹೇಳಬೇಕೆಂದರೆ ಅಸ್ಪೃಶ್ಯನನ್ನು ಗುರುತಿಸಲು ಆತನ ಹಣೆಯ ಮೇಲೆ ಏನನ್ನೂ ಬರೆದಿಲ್ಲ. ಆದರೆ, ವಿಧಿವಿಧಾನ ಆಚರಣೆಗಳ ಮುಖಾಂತರ ವ್ಯಕ್ತಿಯ ಜಾತಿಯನ್ನು ಜನ ಗುರುತಿಸಬಲ್ಲರು. ಈ ಆಚರಣೆಗಳನ್ನು ಆರಂಭ ಕಾಲದಿಂದಲೇ ನಮ್ಮ ಮೇಲೆ ಹೇರಲಾಗಿದೆ ಎಂಬುದು ನನ್ನ ಅಭಿಪ್ರಾಯ'. (ಬಹಿಷ್ಕೃತ ಭಾರತ, 1928), ಹೀಗಾಗಿ ಕೆಳಜಾತಿ ಮಹಿಳೆಯರು ಸ್ವಚ್ಛ ಸುಂದರ ರೂಪವನ್ನು ಹೊಂದಲು, ಅವರ ಮೇಲೆ ಹೇರಲಾದ ಜಾತಿ ಸೂಚಕ ಆಚರಣೆಗಳನ್ನು ಕಿತ್ತೊಗೆಯಲೂ ಕರೆ ನೀಡುತ್ತಾರೆ.

ಯಾವುದೇ ರಾಜಕೀಯ ಹೋರಾಟದಲ್ಲಿ ಅಸ್ತಿತ್ವದ ಅಥವಾ

ವಿಶಿಷ್ಟತೆಯ ವಿಚಾರ ಪ್ರಮುಖವಾದುದು. ಹಲವು ಸಂದರ್ಭಗಳಲ್ಲಿ ರಾಜಕೀಯ ಉದ್ದೇಶಗಳಿಗಾಗಿ ಈ ವಿಶಿಷ್ಟತೆಗಳು ಬಳಕೆ ಯಾಗುತ್ತದೆ. ಈ ವಿಶಿಷ್ಟತೆಗಳೆಂದರೆ ಏನು ಎಂಬ ವಾದ ವಿವಾದಕ್ಕೆ ಇಳಿಯದೆ, ಸಮಕಾಲೀನ ರಾಜಕೀಯದಲ್ಲಿ ವಿಭಿನ್ನ ರಾಜಕೀಯ ಪ್ರಗತಿಪರ ಪ್ರವೃತ್ತಿಗಳಲ್ಲಿನ ವಿಶಿಷ್ಟತೆಗಳನ್ನು ಅಧ್ಯಯನ ಮಾಡುವುದು ಮುಖ್ಯ. ಉದಾಹರಣೆಗೆ ಇತ್ತೀಚಿನ ದಿನಗಳಲ್ಲಿನ ಹಲವು ಚಳುವಳಿಗಳು ಇತರ ಹಿಂದುಳಿದ ವರ್ಗ (ಒಬಿಸಿ), ಮಾತಂಗ್, ಬೌದ್ಧೇತರ ದಲಿತರು, ಮಹಿಳೆಯರು ಅಥವಾ ದಲಿತ ವಿಶಿಷ್ಟತೆಗಳನ್ನು ಕೇಂದ್ರ ನೆಲೆಗೆ ತರುತ್ತಿವೆ. ಈ ವಿಶಿಷ್ಟತೆಗಳನ್ನು ಒಂದೇ ರಾತ್ರಿಗೆ ಸೃಷ್ಟಿಸಿದ್ದಲ್ಲ ಅಥವಾ ಹೇರಿದ್ದಲ್ಲ. ಇಂತಹ ವಿಶಿಷ್ಟ ರಾಜಕಾರಣದ ಮುಖ್ಯ ಅಂಶ ಎಂದರೆ ಅವು ಪ್ರಗತಿಪರ ವಾಗಿರಬೇಕು. ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಹಿತಾಸಕ್ತಿಗಳ ಅಂತ್ಯಕ್ಕಾಗಿ ನಡೆಸುವ ಹೋರಾಟಗಳಲ್ಲಿ ಈ ವಿಶಿಷ್ಟತೆಗಳು ರೂಪು ತಳೆದಲ್ಲಿ ಮಾತ್ರ ಅವು ವಾಸ್ತವವಾಗುತ್ತವೆ.

ಈ ವಿಶಿಷ್ಟತೆಗಳ ಸಂದರ್ಭದಲ್ಲಿ, ಮತ್ತೊಂದು ಮುಖ್ಯ ಅಂಶ ಎಂದರೆ, ಯಾವ ವಿಶಿಷ್ಟತೆ ಖೋಟಾ ಎಂದು ಕೇಳುವ ಅಗತ್ಯ. ಇದು ಬ್ರಾಹ್ಮಣಿಕೆಯದೆ, ಪಿತೃಪ್ರಧಾನವಾದದ್ದೆ ಅಥವಾ ಅಸಮಾನತೆಯದ್ದೆ? ಇದು ನಿಜವಾದಲ್ಲಿ ಅಥವಾ ಇದು ರಾಜಕೀಯ ಅವಕಾಶವಾದದ ವಿಶಿಷ್ಟತೆ ಮಾತ್ರವಾದರೆ, ನಾವು ಅದನ್ನು ಖಂಡಿಸಬೇಕು. ದಲಿತ ವಿಶಿಷ್ಟತೆ, ಅಂಬೇಡ್ಕರ್ ಪೂರ್ವ ಯುಗದಲ್ಲೂ, ಬ್ರಾಹ್ಮಣೇತರ ಪರಂಪರೆಯಿಂದಲೇ ಬಂದಿದೆ. ಶಿವರಾಂ ಜನೋಬಾ ಕಾಂಬ್ಳೆ, ನಾರಾಯಣ ಮೇಘಾಜಿ ಲೊಖಂಡೆ, ಮಹಾತ್ಮಾ ಫುಲೆಯಿಂದ ಡಾ. ಅಂಬೇಡ್ಕರ್ ಅವರವರೆಗೆ ದಲಿತ ವಿಶಿಷ್ಟತೆಯ ಬ್ರಾಹ್ಮಣೇತರ ಬೇರುಗಳ ಮುಂದುವರಿಕೆಯನ್ನೇ ಕಾಣುತ್ತೇವೆ. ಸಮಕಾಲೀನ ದಲಿತ ಚಳುವಳಿಯೂ ಫುಲೆ - ಅಂಬೇಡ್ಕರ್ ವಾದದಿಂದಲೇ ಬೆಳೆದಿದೆ. ದೀರ್ಘ ಹೋರಾಟದ ಇತಿಹಾಸದಿಂದ ಉದಯವಾಗಿರುವ ಇಂತಹ ದಲಿತ ವಿಶಿಷ್ಟತೆ ಕ್ರಾಂತಿಕಾರಿ ವಿಶಿಷ್ಟತೆಯೇ ಆಗಿದೆ. ಈ ವಿಶಿಷ್ಟತೆಯೂ ಒಂದೇ ದಿನದಲ್ಲಿ ಆದದ್ದಲ್ಲ. ದಲಿತ ಸಮುದಾಯವೂ ಈ ವಿಶಿಷ್ಟತೆಯನ್ನು ಸುಲಭವಾಗಿ ಇಟ್ಟುಕೊಡಲು ಬಯಸುವುದೂ ಇಲ್ಲ. ಏಕೆಂದರೆ ಇದು ಸಮೂಹ ಚಳುವಳಿಗಳ ಇತಿಹಾಸವನ್ನು ಆಧರಿಸಿದೆ. ಮಹಿಳೆಯರೂ ಈ ಇತಿಹಾಸದ ಭಾಗವಾಗಿದ್ದರು. ಸಮಾಜ ಸುಧಾರಕರಾದ ಮಹಾತ್ಮ ಜ್ಯೋತಿ ಬಾ ಫುಲೆ, ಗೋಪಾಲ್‌ಬಾಬಾ ವಲಂಗೇಕರ್, ವಿ. ಆರ್. ಶಿಂಧೆ, ಶಿವರಾಂ ಜನೋಬಾ ಕಾಂಬ್ಳೆ, ಷಾಹು ಮಹಾರಾಜ್, ಮುನ್‌ಪಾಂಡೆ ಕಾಳಿಚರಣ್, ನಂದ ಗಾವ್ಳಿ ಮುಂತಾದವರ ಪ್ರಯತ್ನಗಳಿಂದ ಮಹಿಳೆಯರು ಸಾರ್ವಜನಿಕ ಸಭೆಗಳಲ್ಲಿ ಭಾರಿ ಸಂಖ್ಯೆಯಲ್ಲಿ ಹಾಜರಿರುತ್ತಿದ್ದರು. (ಅಂಬೇಡ್ಕರ್ ಚಳುವಳಿಯಲ್ಲಿ ಮಹಿಳೆಯರ ಮೌಖಿಕ ನಿರೂಪಣೆಗಳನ್ನು ಆಮ್ಹೀಹಿ ಇತಿಹಾಸ್ ಘಡಿವಿಲಾ (We also made History) ಸಂ. : ಊರ್ಮಿಳಾ ಪವಾರ್ ಹಾಗೂ ಮೀನಾಕ್ಷಿ ಮೂನ್ - ದಾಖಲಿಸಿದೆ.

ವಿವಿಧ ಜಾತಿ ಆಧಾರಿತ ದೌರ್ಜನ್ಯಗಳ ವಿರುದ್ಧದ ದಲಿತ ಚಳುವಳಿ, ಹಲವು ವಿಶಿಷ್ಟ ಹೋರಾಟಗಳನ್ನು ಕೈಗೆತ್ತಿಕೊಂಡಿದೆ. ಡಾ. ಅಂಬೇಡ್ಕರ್ ಅವರೇ ಚಾವ್‌ದಾರ್ ಕೆರೆ ಸತ್ಯಾಗ್ರಹ ಹಾಗೂ ಕಲಾರಾಂ ಮಂದಿರಕ್ಕೆ ಪ್ರವೇಶದಂತಹ ಹೋರಾಟಗಳ ನೇತೃತ್ವ ವಹಿಸಿದ್ದರು. ಇವು ವಿಸ್ತೃತ ನೆಲೆಯ ಹೋರಾಟಗಳು. 'ತಮಾಷಾ'ಗಳಿಂದ ದೂರವಿರಬೇಕೆಂದು, ತಲೆ ಮೇಲೆ ಗ್ಯಾಸ್ ಲ್ಯಾಂಪ್ ಹೊತ್ತು ನಡೆಯುವುದನ್ನು ತಿರಸ್ಕರಿಸಬೇಕೆಂದು ದಲಿತ ಮಹಿಳಾ ಪರಿಷತ್‌ಗಳಲ್ಲಿ ದಲಿತ ಮಹಿಳೆಯರಿಗೆ ಅವರು ಕರೆ ನೀಡುತ್ತಿದ್ದರು. ಏಕೆಂದರೆ ಈ ಆಚರಣೆಗಳು ಮಹಿಳೆಯರನ್ನು ಕೀಳಾಗಿ ಕಾಣುತ್ತದೆ. ಆದರೆ ಸಮಾಜ ಸುಧಾರಣೆ ಹಾಗೂ ಕ್ರಾಂತಿಕಾರಿ ಹೋರಾಟಕ್ಕೆ ದಲಿತ ಮಹಿಳೆಯರ ಆತ್ಮಗೌರವದ ಪ್ರಶ್ನೆ ಮುಖ್ಯವಾದುದು ಎಂದು ಅಂಬೇಡ್ಕರ್ ಭಾವಿಸುತ್ತಾರೆ.

ಮಹಿಳೆಯರ ವಿಮೋಚನೆ ಜಾತಿ-ವರ್ಗ ವಿನಾಶದ ದೀರ್ಘಾವಧಿ ಕಾರ್ಯಕ್ರಮಕ್ಕೆ ಸಂಬಂಧಿಸಿದ್ದು, ಆದರೆ ಇಂತಹ ಹೋರಾಟ ದೀರ್ಘ ಕಾಲದ್ದು ಎಂಬುದರ ಅರಿವು ಅಂಬೇಡ್ಕರ್‌ಗಿತ್ತು. ಹೀಗಾಗಿ ಅಸ್ಪೃಶ್ಯತೆಯ ಸಂಕೇತಗಳಾದ ಜಾತಿ ಆಧಾರದ ವೇಷಭೂಷಣಗಳನ್ನು ತೊರೆಯಲು ದಲಿತ ಮಹಿಳೆಯರಿಗೆ ಮನವಿ ಮಾಡುವುದು ಮಹಿಳಾ ವಿಮೋಚನೆ ಹೋರಾಟದ ಕಾರ್ಯಕ್ರಮದಲ್ಲಿ ಅಲ್ಪಾವಧಿಯ ಕಾರ್ಯಕ್ರಮ ಎಂಬುದರಲ್ಲಿ ಸಂಶಯವಿಲ್ಲ. ಈ ಆಚರಣೆ, ವಿಧಿ ವಿಧಾನಗಳ ನಿರಾಕರಣೆಯಿಂದ ಜಾತಿ ವಿನಾಶ ಪೂರ್ಣ ಸಾಧ್ಯವಿಲ್ಲ ಎಂಬುದು ಅವರಿಗೆ ಗೊತ್ತಿತ್ತು. ಈ ನಿಲುವು ದಲಿತ ಮಹಿಳೆಯರ ಬ್ರಾಹ್ಮಣೀಕರಣ ಎಂದೂ ತಪ್ಪಾಗಿ ಭಾವಿಸಬಾರದು. ಮಹಿಳೆಯರ ಬ್ರಾಹ್ಮಣೀಕರಣವೇ ಅವರ ನಿಲುವಾಗಿದ್ದಿದ್ದರೆ, ದಲಿತ ಮಹಿಳೆಯರ ಪ್ರಶ್ನೆ ರಾಜಕೀಯ ಪ್ರಶ್ನೆ ಎಂದು ಅವರು ಹೇಳುತ್ತಿರಲಿಲ್ಲ. ಜಾತಿ ವಿನಾಶ ಮುಖ್ಯವಾಗಿ ಮಹಿಳೆಯರ ಹೋರಾಟ ಎಂದೂ ಅವರು ಪರಿಗಣಿಸಿದುದನ್ನು ಇಲ್ಲಿ ಗಮನಿಸಬೇಕು.

**ಅಸ್ಪೃಶ್ಯ ಮಹಿಳೆಯರಲ್ಲಿ ಜಾಗೃತಿ ಮೂಡಿಸುವಿಕೆ**

ಹಲವು ಸಂದರ್ಭಗಳಲ್ಲಿ ಡಾ. ಅಂಬೇಡ್ಕರ್ ಅಸ್ಪೃಶ್ಯ ಮಹಿಳೆಯರನ್ನು ಉದ್ದೇಶಿಸಿ ಮಾತನಾಡಿದ್ದರು. ಈ

ಭಾಷಣಗಳಿಂದ ವೈಯಕ್ತಿಕವಾಗಲಿ, ಸಾಮಾಜಿಕವಾಗಲಿ ಇದು ಮುಖ್ಯವಾಗಿ ರಾಜಕೀಯ ಪ್ರಶ್ನೆ ಎಂದು ಈ ಪ್ರಶ್ನೆಯನ್ನು ಅರಿತುಕೊಂಡಿದ್ದರೆಂಬುದು ಸ್ಪಷ್ಟ. ಹೀಗಾಗಿಯೇ ಆಗಾಗ್ಗೆ ಅಸ್ಪೃಶ್ಯತೆ ವಿನಾಶ ಮಹಿಳೆಯರ ಹೊಣೆಗಾರಿಕೆ ಎಂದು ಹಲವು ಬಾರಿ ಒತ್ತಿ ಹೇಳುತ್ತಿದ್ದರು. ಅಲ್ಲದೆ ಈ ಗುರಿ ಸಾಧನೆಗೆ ಪುರುಷರು ಹೆಚ್ಚು ಕಾಲ ತೆಗೆದುಕೊಳ್ಳುತ್ತಾರೆ ಎಂದೂ ಅವರು ಹೇಳುತ್ತಿದ್ದರು. ಈ ಉದ್ದೇಶಕ್ಕಾಗಿಯೇ, ಅವರು ಯಾವಾಗಲೂ ಮಹಿಳೆಯರ ಪ್ರತ್ಯೇಕ ರಾಜಕೀಯ ಸಭೆಗಳನ್ನು ಏರ್ಪಡಿಸುತ್ತಿದ್ದರು. ಇಂತಹ ಒಂದು ಕ್ರಿಯೆಯೇ ದಲಿತ ಮಹಿಳಾ ಒಕ್ಕೂಟದ ರಚನೆಗೆ ಕಾರಣವಾಯಿತು.

ಈ ದೃಷ್ಟಿಯಿಂದ 1942ರಲ್ಲಿ ದಲಿತ ಮಹಿಳಾ ಒಕ್ಕೂಟಕ್ಕೆ ಡಾ. ಅಂಬೇಡ್ಕರ್ ಮಾಡಿದ ಭಾಷಣ ಮುಖ್ಯವಾದುದು. ಯಾವುದೇ ಹೋರಾಟಕ್ಕೆ ಮಹಿಳೆಯರ ಪಾಲ್ಗೊಳ್ಳುವಿಕೆ ಅದರ ಯಶಸ್ಸು ಅಥವಾ ವೈಫಲ್ಯಕ್ಕೆ ಮಾನದಂಡವಾಗುತ್ತದೆ ಎಂದು ಇಲ್ಲಿ ಅವರು ಹೇಳುತ್ತಾರೆ. ಈ ಭಾಷಣಗಳಲ್ಲಿ ಡಾ. ಅಂಬೇಡ್ಕರ್ ಅವರು

ಅ. ಸ್ವತಂತ್ರ ಮಹಿಳಾ ಸಂಘಟನೆಗಳ ರಚನೆ ಪರ ವಾದಿಸುತ್ತಾರೆ.

ಆ. ಮಹಿಳೆಯರು ಮುಂದೆ ಬಂದಲ್ಲಿ ಸಾಮಾಜಿಕ ಪ್ರಗತಿ ಸಾಧ್ಯ ಎಂದು ಒತ್ತಿ ಹೇಳುತ್ತಾರೆ.

ಇ. ಪುರುಷ-ಮಹಿಳೆ ಸಮಾನತೆಯಲ್ಲಿ ತಮ್ಮ ನಂಬಿಕೆ ಪುನರ್ ಪ್ರತಿಷ್ಠಾಪಿಸುತ್ತಾರೆ.

ಈ. ದಲಿತ ಮಹಿಳೆಯರ ಪ್ರಗತಿಯನ್ನು ದಲಿತ ಸಮುದಾಯದಲ್ಲಾಗಿರುವ ಪ್ರಗತಿಯ ಮಾನದಂಡವಾಗಿ ಪರಿಗಣಿಸುತ್ತಾರೆ.

ಉ. ಮಹಿಳೆಯರು ಹೋರಾಟಗಳಲ್ಲಿ ಸಮಾನರಾಗಿ ಪಾಲ್ಗೊಳ್ಳಬೇಕು. ತಂದೆ, ಸೋದರ ಅಥವಾ ಪತಿ ಹೋರಾಟಗಳಲ್ಲಿ ಇದ್ದಾರೆಂಬ ಕಾರಣಕ್ಕಾಗಿ ಅಲ್ಲ. ಆತನ ಗುಲಾಮಳಾಗಿಯೋ, ಅನುಯಾಯಿಯಾಗಿಯೋ ಹೋರಾಟದಲ್ಲಿ ಪಾಲ್ಗೊಳ್ಳಬೇಕಿಲ್ಲ. ಆಕೆಯೂ ಸಮಾನಳಾಗಿರಬೇಕು, ಸ್ನೇಹಿತೆಯಂತಿರಬೇಕು ಎಂದೂ ಅವರು ವಾದಿಸುತ್ತಾರೆ.

ಈ ಭಾಷಣಗಳಲ್ಲಿ ಶೋಷಿತ ಮಹಿಳೆಯರ ಸಾಮರ್ಥ್ಯದ ಬಗ್ಗೆ ಡಾ. ಅಂಬೇಡ್ಕರ್‌ಗಿದ್ದ ನಂಬಿಕೆ ಸ್ಪಷ್ಟ. ಇವರ ವಿಚಾರ ಮತ್ತು ಕೃತಿಯ ಪ್ರಸಾರದ ಮೂಲಕ ದಲಿತ ಮಹಿಳೆಯರು ಎಚ್ಚರಗೊಳ್ಳಲು, ಸಂಘಟಿತರಾಗಲು, ಬಂಡಾಯವೇಳಲು ಕಾರಣವಾಯಿತು. ಸತ್ಯಾಗ್ರಹ ಹಾಗೂ ಮೋರ್ಚಾಗಳಲ್ಲಿ ಮಹಿಳೆಯರು ಅಸಂಖ್ಯ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಇದೇ ಮೊದಲ ಬಾರಿಗೆ ದಲಿತ ಮಹಿಳೆಯರು ತಮ್ಮ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬೇಡಿಕೆಗಳ ಬೆಂಬಲಾರ್ಥ ಸಾರ್ವಜನಿಕವಾಗಿ ಹೊರ ಬಂದರು. ಇದಕ್ಕೂ ಮುಂಚೆ ಮಹಾತ್ಮಾ ಗಾಂಧಿ ನೇತೃತ್ವದ ಹೋರಾಟಗಳಲ್ಲಿ ಮಹಿಳೆಯರು ಸಾರ್ವಜನಿಕವಾಗಿ ಹೊರಬಂದಿದ್ದರು. ಆದರೆ ಸ್ಥಿತ್ಯಂತರ ಅಥವಾ ಕ್ರಾಂತಿಕಾರಿ ಹೋರಾಟ ಎನಿಸಿಕೊಂಡ ಹೋರಾಟಗಳು ಎಂದುಕೊಂಡಾಗ, ಅಂಬೇಡ್ಕರ್ ಚಳುವಳಿ ಕಾಲದಲ್ಲಿ ಮಹಿಳೆಯರು ಮೊದಲ ಬಾರಿಗೆ ಬೀದಿಗೆ ಬಂದರು. ದಲಿತ ಮಹಿಳೆಯರಲ್ಲಿ ಈ ಸಂಘಟನಾತ್ಮಕ ಶಕ್ತಿ ತುಂಬಿದ ಕೀರ್ತಿ ಅಂಬೇಡ್ಕರ್‌ಗೆ ಸಲ್ಲುತ್ತದೆ.

ಅಂಬೇಡ್ಕರ್ ತಂದ ರಾಜಕೀಯ ಪ್ರಜ್ಞೆ ದಲಿತ ಮಹಿಳಾ ಫೆಡರೇಷನ್‌ನ ಕಾರ್ಯಕ್ರಮ ಹಾಗೂ ನಾಯಕತ್ವದಲ್ಲಿ ಪ್ರತಿಬಿಂಬಿತವಾಗಿದೆ. ಅಂದು ಇಂದಿರಾಬಾಯಿ ಪಾಟೀಲ್ ಹೀಗೆ ಹೇಳುತ್ತಾರೆ....... "...ಹಿಂದೂ ಧರ್ಮ ನಮ್ಮ ಮನಸ್ಸನ್ನು ಭ್ರಷ್ಟಗೊಳಿಸಿದೆ. ಪತಿಯ ಎಲ್ಲಾ ಇಷ್ಟಾನಿಷ್ಟಗಳಿಗೆ ಬಲಿಯಾಗುತ್ತ ಬರೀ ಮನೆ ನೋಡಿಕೊಳ್ಳುವುದಷ್ಟೇ ನಮ್ಮ ಕೆಲಸ ಎಂದುಕೊಂಡಿದ್ದೇವೆ. ನಮ್ಮ ಸೋದರಿಯರ ಮನಸ್ಸುಗಳಿಂದ ಈ ದಾಸ್ಯದ ಕಲ್ಪನೆಗಳನ್ನು ಕಿತ್ತೊಗೆಯುವ ಮುಖ್ಯ ಕಾಯಕ ನಮ್ಮ ಮುಂದಿದೆ".

ಇದೇ ರೀತಿ ಫೆಡರೇಷನ್‌ನ ಅಧ್ಯಕ್ಷೆಯಾಗಿದ್ದ ಸುಲೋಚನಾಬಾಯಿ ಡೋಂಗ್ರೆ ಹೀಗೆ ಒತ್ತಾಯಿಸಿದ್ದಾರೆ. "ನಮ್ಮ ಮಹಿಳೆಯರು ಎಲ್ಲಾ ಸ್ಥಳೀಯ ಜಿಲ್ಲಾ ಮಟ್ಟದ ಮಂಡಳಿಗಳಲ್ಲಿ ಪ್ರಾತಿನಿಧ್ಯ ಪಡೆದುಕೊಳ್ಳಬೇಕು.... ನಿರ್ದಿಷ್ಟ ಪರಿಸ್ಥಿತಿಗಳಲ್ಲಿ ವಿವಾಹ ವಿಚ್ಛೇದನ ಪಡೆಯುವ ಹಕ್ಕು ಮಹಿಳೆಗಿರಬೇಕು. ಬಹುಪತ್ನಿತ್ವವನ್ನು ಕಾನೂನಿನ ಮೂಲಕ ಬಹಿಷ್ಕರಿಸಬೇಕು. ದಲಿತ ಮಹಿಳೆಯರು ಕುಟುಂಬ ಯೋಜನೆಯ ತತ್ವ ಅಳವಡಿಸಿಕೊಳ್ಳಬೇಕು. ದಲಿತ ಮಹಿಳೆಯರ ಶಿಕ್ಷಣದ ಪ್ರಗತಿಗಾಗಿ, ಎಲ್ಲಾ ಸ್ಥಳಗಳಲ್ಲೂ ಹಾಸ್ಟೆಲ್‌ಗಳನ್ನು ಆರಂಭಿಸಬೇಕು".

ಹೀಗೆ ದಲಿತ ಮಹಿಳೆಯರು ತಮ್ಮ ಅಸ್ತಿತ್ವ ಕಂಡುಕೊಳ್ಳುವುದಕ್ಕಾಗಿ, ಮಾನವೀಯ ಸಮಾಜಕ್ಕಾಗಿ, ಸಂಘಟನೆಯ ಪ್ರಯಾಣ ಆರಂಭಿಸಿದರು. ಸವರ್ಣ ಪುರುಷ ಮತ್ತು ಮಹಿಳೆಯರ ಅವಮಾನಕರ ವರ್ತನೆಗಳಿಗೆ ಬಹಿರಂಗವಾಗಿ ಪ್ರತಿಕ್ರಿಯಿಸ ತೊಡಗಿದರು. ಇದು ಹೊಸ ಅರಿವು ಹಾಗೂ ರಾಜಕೀಯ ಪ್ರಜ್ಞೆಯ ನೀರ ಕೊಡುಗೆಯಾಗಿತ್ತು. ಅಖಿಲ ಭಾರತೀಯ ಮಹಿಳಾ ಪರಿಷತ್‌ನಲ್ಲಿ ಒಮ್ಮೆ, ಸವರ್ಣೀಯ ಮಹಿಳೆಯರು ದಲಿತ ಮಹಿಳಾ ಪ್ರತಿನಿಧಿಗಳಿಗೆ ಪ್ರತ್ಯೇಕ ತಟ್ಟೆ ಇಡುವ ಮೂಲಕ ತಾರತಮ್ಯ ಮಾಡಿದ್ದರು. ಈ 1938ರ ಜನವರಿ ಸಮ್ಮೇಳನದಲ್ಲಿ, ಇಬ್ಬರು ದಲಿತ ಮಹಿಳೆಯರು ಈ ಕ್ರಿಯೆಯನ್ನು ಖಂಡಿಸಿದರು.

ದೇವಾಲಯ ಪ್ರವೇಶದ 1930ರ ಏಪ್ರಿಲ್ 7ರ ಘಟನೆ ಇಲ್ಲಿ ಮುಖ್ಯವಾದುದು. ದೇವಾಲಯ ಪ್ರವೇಶ ಸಂದರ್ಭದಲ್ಲಿ ಪೂಜಾರಿಯೊಬ್ಬರು ದಲಿತ ಯುವತಿಯನ್ನು ಆಚೆ ಕಡೆ ತಳ್ಳಿದಾಗ, ಆಕೆ ಆತನ ಕೆನ್ನೆಗೆ ಹೊಡೆದಳು. (ವೈ.ಡಿ. ಫಡ್ಕೆ - ಡಾ. ಅಂಬೇಡ್ಕರ್ ಆನಿ ಕಲಾರಾಂ ಸತ್ಯಾಗ್ರಹ). ಇಂತಹ ಘಟನೆಗಳು ಸ್ವಾಭಿಮಾನದ ಕಿಡಿಯನ್ನು ಹತ್ತಿಸಿದ್ದವು. ಅಂಬೇಡ್ಕರ್ ಸಂಘಟಿಸಿದ ರಾಜಕೀಯ ಪರಿಷತ್‌ಗಳಲ್ಲಿ ಪ್ರತ್ಯೇಕ ಮಹಿಳಾ ಪರಿಷತ್‌ಗಳನ್ನೂ ಸಂಘಟಿಸಲಾಗುತ್ತಿತ್ತು. ಅಲ್ಲದೆ ಪರಿಷತ್ ಅನೇಕ ನಿರ್ಣಯಗಳನ್ನೂ ಅಂಗೀಕರಿಸಿ ದಲಿತ ಮಹಿಳೆಯರ ವಿರುದ್ಧದ ದೌರ್ಜನ್ಯ ಖಂಡಿಸುತ್ತಿದ್ದವು. ಇವು ಮುಖ್ಯವಾಗಿ ಮಹಿಳೆಯರನ್ನು ದಾಸ್ಯದಲ್ಲಿರಿಸುವ ಆಚರಣೆಗಳ ವಿರುದ್ಧದ ನಿರ್ಣಯಗಳಾಗಿರುತ್ತಿದ್ದವು. ಪ್ರಮುಖವಾದ ಒಂದು ನಿರ್ಣಯದಲ್ಲಿ ಪರಿಷತ್ ಬಾಲ್ಯವಿವಾಹ ಆಚರಣೆ ಖಂಡಿಸಿ ಇದರ ಜೈವಿಕ ಹಾಗೂ ಮನಶ್ಶಾಸ್ತ್ರೀಯ ಪರಿಣಾಮ ಕುರಿತು ಚರ್ಚಿಸಿತ್ತು. ವಿವಾಹದ ವಯಸ್ಸನ್ನು ಹುಡುಗರಿಗೆ ಕನಿಷ್ಠ 22, ಹುಡುಗಿಯರಿಗೆ 16 ಎಂದು ನಿಗದಿಗೊಳಿಸಲಾಗಿತ್ತು. (ಬಹಿಷ್ಕೃತ ಭಾರತ, 1927). ವರದಕ್ಷಿಣೆ ಮಹಿಳೆಯರಿಗೆ ಆತಂಕಕಾರಿ ಎಂದು ಭಾವಿಸಿ, ವಿವಾಹ ಸಂದರ್ಭದಲ್ಲಿನ ಖರ್ಚು ಗರಿಷ್ಠ 16 ರೂಪಾಯಿ ದಾಟಬಾರದು ಎಂದೂ ನಿರ್ಣಯ ಕೈಗೊಂಡಿತ್ತು. ಈ 16 ರೂಪಾಯಿಗಳನ್ನು ಖರ್ಚು ಮಾಡುವ ವಿಧಾನವನ್ನೂ ವಿವರಿಸಲಾಗಿತ್ತು. ಹೆಣ್ಣು ಮಕ್ಕಳಿಗೆ ತಂದೆ ತಾಯಿ ವಿವಾಹ ಸಂದರ್ಭದಲ್ಲಿ ಯಾವುದೇ ಆಭರಣ ಕೊಡುಗೆಯಾಗಿ ನೀಡಬಾರದು ಎಂದೂ ನಿರ್ಣಯಿಸಲಾಗಿತ್ತು.

ಇವೆಲ್ಲ ದಲಿತ ಮಹಿಳೆಯರಲ್ಲಿ ಅಪಾರ ಆತ್ಮಗೌರವ ಹೆಚ್ಚಿಸಲು ಕಾರಣವಾದವು. ನಾಗಪುರದಲ್ಲಿ ಅಧ್ಯಾಪಕಿ ತರಬೇತಿ ಪಡೆದ ಜಾಯಿಬಾಯಿ ಚೌಧರಿ ಶಾಲೆಯಲ್ಲಿ ಕೆಲಸ ಹಿಡಿದರು. ಆದರೆ ದಲಿತ ಅಧ್ಯಾಪಕಿಯಿಂದ ಪಾಠ ಕೇಳಲು ಸವರ್ಣೀಯ ಹಾಗೂ ಕ್ರೈಸ್ತ ವಿದ್ಯಾರ್ಥಿಗಳು ನಿರಾಕರಿಸಿದರು. ಆಕೆಗೆ ಕ್ರೈಸ್ತ ಮತಕ್ಕೆ ಮತಾಂತರವಾಗಲು ಸೂಚಿಸಲಾಯಿತು. ಮತಾಂತರದಿಂದ ಈ ವಿಚಾರ ಪರಿಹಾರವಾಗುವಷ್ಟು ಸರಳವಲ್ಲ ಎಂಬುದನ್ನು ಮನಗಂಡ ಆಕೆ ಕೆಲಸಕ್ಕೆ ರಾಜೀನಾಮೆ ನೀಡಿದರು. ಜಾತಿಗಳ ವಿನಾಶವೇ ನಿಜವಾದ ಹೋರಾಟವೆಂದು ಅರಿತು ಆಕೆ 'ಚೋಕ್ಕಮೇಳ ಬಾಲಕಿಯರ ಶಾಲೆ' ಆರಂಭಿಸಿದರು. ಜೀವನದ ಅಂತ್ಯದವರೆಗೆ ದಲಿತ ಮಹಿಳೆಯರ ಹೋರಾಟದಲ್ಲಿ ಆಕೆ ಸಕ್ರಿಯರಾಗಿದ್ದರು. 1920ರಲ್ಲಿ ಬಹಿಷ್ಕೃತ ಸಮಾಜ ಪರಿಷತ್ ಬಾಲಕಿಯರಿಗೆ ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣ ನೀಡಬೇಕು ಎಂಬ ನಿರ್ಣಯ ಅಂಗೀಕರಿಸಿತು. ಈ ಸಂದರ್ಭದಲ್ಲಿ ತುಳಸಾಬಾಯಿ ಬಾನ್ಸೋಡೆ ಹಾಗೂ ರುಕ್ಮಿಣಿ ಕೊಟಾಂಗಲೆ ಪರಿಣಾಮಕಾರಿ ಭಾಷಣಗಳನ್ನು ಮಾಡಿದರು.

**ಮಹಿಳೆಯರ ವಿರುದ್ಧದ ದೌರ್ಜನ್ಯಕ್ಕೆ ಅಂಬೇಡ್ಕರ್ ವಿರೋಧ**

1956ರಲ್ಲಿ ಲಕ್ಷಾಂತರ ಜನರ ಮಧ್ಯೆ ಅಂಬೇಡ್ಕರ್ ಬೌದ್ಧ ಧರ್ಮಕ್ಕೆ ಪರಿವರ್ತಿತರಾದರು. ನವ ಬೌದ್ಧರಿಗೆ 22 ವಚನಗಳನ್ನು ಬೋಧಿಸಿದರು. ಇವುಗಳಲ್ಲಿ ಒಂದು "ನಾನು ಮದ್ಯದಿಂದ ದೂರವಿರುತ್ತೇನೆ", ಮದ್ಯ ಸೇವನೆ ಚಟದ ವ್ಯಕ್ತಿಗಳಿಂದ ಕುಟುಂಬದಲ್ಲಿ ಕೆಟ್ಟ ಪರಿಣಾಮಗಳನ್ನು ಅನುಭವಿಸುವ ಮಹಿಳೆಯರ ರಕ್ಷಣೆ ಇದರ ಮುಖ್ಯ ಉದ್ದೇಶವಾಗಿತ್ತು. ಬೌದ್ಧ ಧರ್ಮದಲ್ಲಿರುವ ಸ್ವಾತಂತ್ರ್ಯ ಹಾಗೂ ಮಹಿಳೆಯರಿಗೆ ಜ್ಞಾನದ ಅವಕಾಶ, ಅದರ ಧರ್ಮದ ಮೇಲಿನ ಚಿಂತನೆಯಲ್ಲಿ ಪ್ರಮುಖ ಪರಿಣಾಮ ಬೀರಿತು.

ವೇಶ್ಯೆಯರ ಸಮಾವೇಶದಲ್ಲಿ ಅವರು ನೀಡಿದ ಭಾಷಣದಲ್ಲೂ ಮಹಿಳೆಯರ ವಿರುದ್ಧದ ದೌರ್ಜನ್ಯಕ್ಕೆ ಅವರ ವಿರೋಧವನ್ನು ಸ್ಪಷ್ಟಪಡಿಸುತ್ತದೆ. 1938ರಲ್ಲಿ ನಡೆದ ದೇವದಾಸಿ, ವಾಘ್ಯಾ ಹಾಗೂ ಮುರಳಿಗಳ ಸಮಾವೇಶದಲ್ಲಿ ಅವರು "ವೇಶ್ಯಾವೃತ್ತಿ ನಿಲ್ಲಿಸಿ. ಬಡತನಕ್ಕೆ ನಾವು ಅಂಜಬೇಕಿಲ್ಲ. ಬಡತನ ನಮ್ಮ ಜನ್ಮಕ್ಕಂಟಿದ್ದು. ಆದರೆ ಬಡತನದ ಅಂಜಿಕೆಗೆ ಈ ವೃತ್ತಿ ಬೇಡ" ಎಂದು ಕರೆ ನೀಡಿದರು. ಬಡತನ ದೇಹ ಮಾರಿಕೊಳ್ಳಲು ಪ್ರಚೋದಿಸುವಂತಹದ್ದು, ಮಹಿಳೆಯರ ವಿರುದ್ಧದ ದೌರ್ಜನ್ಯ ಎಂದು ಅವರು ಪರಿಗಣಿಸಿದರು. ಈ ತತ್ವದ ಹಿನ್ನೆಲೆಯಲ್ಲಿಯೇ ಬ್ರಾಹ್ಮಣ ತಮಾಷಾ ಕಲಾವಿದ ಪಟ್ಟೆ ಬಾಪೂರಾವ್ ದಾನ ನೀಡಿದ ಹಣ ಅಂಗೀಕರಿಸಲು ಅಂಬೇಡ್ಕರ್ ತಿರಸ್ಕರಿಸಿದ್ದರು. ಅಲ್ಲದೆ ತಮಾಷಾ ವೇದಿಕೆಯಲ್ಲಿ ದಲಿತ ಮಹಿಳೆ ಪಾವಲಬಾಯಿಯನ್ನು ನರ್ತಿಸುವಂತೆ ಮಾಡಿ ಈ ಹಣ ಸಂಗ್ರಹಿಸಲಾಗಿದೆ ಎಂದು ವಾದಿಸಿದ್ದರು. ದೇವದಾಸಿ ಪದ್ಧತಿಯಂತಹ ಜಾತಿ ಆಧಾರಿತ ವೇಶ್ಯಾವೃತ್ತಿಯಿಂದ ಹೆಚ್ಚು ಶೋಷಿತರಾದವರು ದಲಿತ ಮಹಿಳೆಯರು ಎಂದು ಅಂಬೇಡ್ಕರ್ ಖಂಡಿಸುತ್ತಿದ್ದರು.

'ಹಿಂದೂ ಮಹಿಳೆಯರ ಉನ್ನತಿ ಮತ್ತು ಅವನತಿ'ಯಲ್ಲಿ ಡಾ. ಅಂಬೇಡ್ಕರ್‌ರ ಮುನ್ನುಡಿ, ಮಹಿಳೆಯರ ವಿರುದ್ಧದ ದೌರ್ಜನ್ಯವನ್ನು ಅವರು ಹೇಗೆ ವಿರೋಧಿಸಿದರೆಂಬುದನ್ನು ವಿವರಿಸುತ್ತದೆ. ಈ ಮುನ್ನುಡಿಯನ್ನು "ಕಣ್ಣೀರಿನ ನುಡಿಗಳು" ಎಂದು ಕರೆಯುವ ಅವರು, ಮುಖ್ಯ ಕಥೆಯೊಂದರ ಉಲ್ಲೇಖ ನೀಡುತ್ತಾರೆ. ಒಂದು ಹಳ್ಳಿಯಲ್ಲಿ ಬೌದ್ಧ ಸನ್ಯಾಸಿಯೋರ್ವನನ್ನು ಪೂರ್ಣ ಬಹಿಷ್ಕರಿಸುವ ಸೂಚನೆ ನೀಡಲಾಗಿರುತ್ತದೆ. ಆದರೆ ಬ್ರಾಹ್ಮಣ ಮಹಿಳೆಯೊಬ್ಬಳು ಈ ಆದೇಶ ಉಲ್ಲಂಘಿಸಿ ಬಾಯಾರಿದ ಸನ್ಯಾಸಿಗೆ ನೀರು ನೀಡುತ್ತಾಳೆ. ಗ್ರಾಮದ ಪುರುಷರು ಆಕೆಗೆ ಪಾಠ ಕಲಿಸಲು ಆಕೆಯನ್ನು ಥಳಿಸುತ್ತಾರೆ. ಮಹಿಳೆಯರ ವಿರುದ್ಧ ಇಂತಹ ಹಿಂಸಾಚಾರ ವಿರೋಧಿಸುವ ಅಂಬೇಡ್ಕರ್ ಸಮಾಜದಲ್ಲಿ ಆಕೆಯ ಸ್ಥಿತಿಗಾಗಿ ದುಃಖಿಸುತ್ತಾರೆ.

ಡಾ. ಅಂಬೇಡ್ಕರ್ : ಮಹಾತ್ಮಾ ಫುಲೆ ಚಿಂತನೆಯ ಉತ್ತರಾಧಿಕಾರಿ

ಡಾ. ಅಂಬೇಡ್ಕರ್ ಅವರು ಮಹಾತ್ಮಾ ಫುಲೆಯ ಅಬ್ರಾಹ್ಮಣ ಚಿಂತನೆಯ ಪರಂಪರೆಯನ್ನು ಮುಂದುವರಿಸಿದರು. ಮಹಿಳಾ ವಿಮೋಚನೆಯ ಸಂದರ್ಭದಲ್ಲೂ ಇದು ಸತ್ಯ. ಬಾಲಕಿಯರ ಶಿಕ್ಷಣ, ಶಿಶು ಹತ್ಯೆ ತಡೆ, ಅನಾಥ ಮಹಿಳೆಯ ನೋವುಗಳು ಇವೆಲ್ಲಾ ವಿಚಾರಗಳು ಫುಲೆಯವರ ಕೃತಿಗಳಲ್ಲಿ ಕಂಡು ಬಂದಂತೆ ಅಂಬೇಡ್ಕರ್‌ರ ಕೃತಿಗಳಲ್ಲೂ ಕಾಣಸಿಗುತ್ತದೆ.

ಅನಾಥ ಮಕ್ಕಳು ಹಾಗೂ ಅವಿವಾಹಿತ ತಾಯಂದಿರಿಗಾಗಿ ಮರುಗಿದ ಅಂಬೇಡ್ಕರ್ ಔರಂಗಾಬಾದ್‌ನಲ್ಲಿ ಅವರಿಗಾಗಿಯೇ ವಸತಿ ಆರಂಭಿಸುವ ಪ್ರಸ್ತಾವನೆ ಮಂಡಿಸಿದವರೂ ಅವರೇ. "ಅನಾಥ ಹಾಗೂ ಅವಿವಾಹಿತ ತಾಯಂದಿರು ತೊರೆದು ಹೋದ ಚಿಕ್ಕ ಮಕ್ಕಳನ್ನು ಇಲ್ಲಿಗೆ ಕರೆ ತನ್ನಿ. ನಾನು ವೈಯಕ್ತಿಕವಾಗಿ ಅವರ ಕಾಳಜಿ ವಹಿಸುತ್ತೇನೆ" ಎಂದೂ ಹೇಳಿದ್ದರು.

ಸಾವಿತ್ರಿಬಾಯಿ ಹಾಗೂ ಜೋತಿಬಾ ಫುಲೆ ಅವರಿಗೆ ತಮ್ಮದೇ ಮಕ್ಕಳಾಗಲಿಲ್ಲ. ಅಂದಿನ ದಿನಗಳಲ್ಲಿ ಮರು ಮದುವೆಯಾಗಿ ಮಕ್ಕಳನ್ನು ಪಡೆಯುವ ಒತ್ತಡ ಜೋತಿಬಾರಿಗಿದ್ದಿರಬೇಕು. ಆದರೆ ಈ ಒತ್ತಡಗಳನ್ನು ನಿರಾಕರಿಸಿ ಅವರು ದೌರ್ಜನ್ಯಕ್ಕೊಳಗಾದ ವಿಧವೆಯೊಬ್ಬಳ ಮಗುವನ್ನು ದತ್ತು ಸ್ವೀಕರಿಸುತ್ತಾರೆ. ಗೇಲ್ ಓಮ್‌ವೆಟ್ ಹೇಳುವಂತೆ "ತಮ್ಮದೇ ರಕ್ತದ ಉತ್ತರಾಧಿಕಾರಿ ಪಡೆಯುವ ಬದಲಿಗೆ ಅವರು ವಿಧವೆಯೊಬ್ಬಳ ಮಗುವನ್ನು (ಸಹಜವಾಗಿ 'ಅಕ್ರಮ' ಸಂತಾನ) ದತ್ತು ಸ್ವೀಕರಿಸುತ್ತಾರೆ. ಸಾಮಾನ್ಯವಾಗಿ ಆಚರಣೆಯಲ್ಲಿರುವಂತೆ ಸಮೀಪ ಬಂಧುಗಳ ಮಗುವನ್ನು ದತ್ತು ಸ್ವೀಕರಿಸುವುದಿಲ್ಲ. (ಮಹಾತ್ಮಾ ಜೋತಿಬಾ ಫುಲೆ ಆನಿ ಸ್ತ್ರೀಮುಕ್ತಿಚಾ, ವಿಚಾರ್, ಪುಟ. 15) ಮಕ್ಕಳನ್ನು ಪಡೆಯುವುದೆ ದಾಂಪತ್ಯದ ಪರಮ ಗುರಿ ಎಂದು ಅವರು ಭಾವಿಸಲಿಲ್ಲ. ಅಂಬೇಡ್ಕರ್‌ರದೂ ಇದೇ ದೃಷ್ಟಿಯಾಗಿತ್ತು. ಬಾಲಕಿಯರ ಶಿಕ್ಷಣಕ್ಕೆ ಸಂಬಂಧಿಸಿದಂತೆಯೂ ಇಂತಹದೇ ವಿಚಾರ ಹೊಂದಿದ್ದರು. ಮಹಾಡ್ ಸತ್ಯಾಗ್ರಹ ಪರಿಷತ್‌ನಲ್ಲಿ ಮಾತನಾಡುತ್ತಾ "ನೀವು ನಿಮ್ಮ ಹೆಣ್ಣುಮಕ್ಕಳನ್ನು ಸುಶಿಕ್ಷಿತರನ್ನಾಗಿಸಬೇಕು. ಜ್ಞಾನ ಮತ್ತು ಶಿಕ್ಷಣ ಪುರುಷರಿಗೆ ಮಾತ್ರ ಅಲ್ಲ. ಇವು ಮಹಿಳೆಯರಿಗೂ ಮುಖ್ಯವಾದುದು.... ನೀವು ನಿಮ್ಮ ಮುಂದಿನ ಪೀಳಿಗೆ ಪ್ರಗತಿ ಹೊಂದಬೇಕೆಂದು ಬಯಸಿದಲ್ಲಿ, ನೀವು ನಿಮ್ಮ ಹೆಣ್ಣು ಮಕ್ಕಳನ್ನು ಸುಶಿಕ್ಷಿತರನ್ನಾಗಿಸಬೇಕು ಎಂದು ಕರೆ ನೀಡುತ್ತಾರೆ.

"ವೈಯಕ್ತಿಕವಾದದ್ದು ರಾಜಕೀಯವಾದದ್ದು" ಎಂಬ ನಿಲುವನ್ನೇ ಡಾ. ಅಂಬೇಡ್ಕರ್ ಸಹ ಹೊಂದಿದ್ದರು. ಮನೆಯೊಳಗೆ ಖಾಸಗಿಯಾಗಿ ಮಹಿಳೆಯರು ಅನುಭವಿಸುವ ದೌರ್ಜನ್ಯಗಳನ್ನು ಕಾನೂನಿನ ಚೌಕಟ್ಟಿನೊಳಗೆ ಸಾರ್ವಜನಿಕ ವಲಯಕ್ಕೆ ತರಲು ಅವರು ಪ್ರಯತ್ನಿಸಿದರು ಎಂಬುದನ್ನು ನಾವು ನೆನಪಿಡಬೇಕು.

## 1991ರಿಂದ 1999ರವರೆಗೆ ಬಿಹಾರದಲ್ಲಾದ ಹತ್ಯೆಗಳು

| ವರ್ಷ | ಹಳ್ಳಿ | ಜಿಲ್ಲೆ | ಹತ್ಯೆಗೀಡಾದವರು |
|---|---|---|---|
| 1991 | ತಿಸ್ಕೋರಾ | ಪಾಟ್ನಾ | 14 ದಲಿತರು |
| 1991 | ಮಲ್ಬೀರಿಯಾ | ಪಲಾಮು | 14 ದಲಿತರು |
| 1991 | ದಿಯೊಸಾಹಿಯಾರಾ | ಭೋಜಪುರ | ದಲಿತರು |
| 1992 | ನೀಮ್‌ಬರ್ ಸಿಂಥಾ | ಗಯಾ | 10 ದಲಿತರು |
| 1992 | ಬಾರಾ | ಗಯಾ | 34 ಮೇಲ್ಜಾತಿಯವರು |
| 1996 | ಬಾಥಾನಿತೋಲಾ | ಭೋಜಪುರ | 21 ದಲಿತರು |
| 1997 | ಅಂಕೋದಾರ್ | ಚತ್ರ | 10 ದಲಿತರು |
| 1997 | ಹೈಬಸ್‌ಪುರ | ಪಾಟ್ನಾ | 10 ದಲಿತರು |
| 1997 | ಬಾಥೆ | ಜೆಹಾನಾಬಾದ್ | 58 ದಲಿತರು |
| 1998 | ಅತ್ಕಾದಿಹ | ಪಲಾಮು | 10 ಜನ ಹಿಂದುಳಿದ ಜಾತಿಯವರು |
| 1998 | ನಗರಿ | ಭೋಜಪುರ | 10 ದಲಿತರು |
| 1999 | ಶಂಕರಾಬಿಘಾ | ಜೆಹಾನಾಬಾದ್ | 23 ದಲಿತರು |
| 1999 | ನಾರಾಯಣಪುರ | ಜೆಹಾನಾಬಾದ್ | 11 ದಲಿತರು |
| 1999 | ಸೇನಾರಿ | ಜೆಹಾನಾಬಾದ್ | 35 ಮೇಲ್ಜಾತಿಯವರು |

(ಆಧಾರ - ದಿ ವೀಕ್ ಪತ್ರಿಕೆ)

# ಬಡತನ : ಸಂವಿಧಾನದ ಆಶಯಗಳು ಭಂಗ

*ಜಸ್ವೀರ್ ಸಿಂಗ್*

ಭಾರತದ ಜನಸಮುದಾಯ ಬಡತನ-ಭಾರತದ ಸ್ವಾತಂತ್ರ್ಯ ಚಳವಳಿಯ ಕಾಲದ ಪ್ರಮುಖ ಕಾಳಜಿಯಾಗಿತ್ತು. ರಾಷ್ಟ್ರದ ಮೊದಲ ಪ್ರಧಾನಿ ಹಾಗೂ ನಂತರ 17 ವರ್ಷಗಳ ಕಾಲ ರಾಷ್ಟ್ರದ ಆಡಳಿತ ಸೂತ್ರ ಹಿಡಿದಿದ್ದ (1947 ರಿಂದ 1964) ಜವಾಹರಲಾಲ್ ನೆಹರೂ ಅವರು, 1947ರ ಆಗಸ್ಟ್ 15ರಂದು ಆಡಳಿತ ವಹಿಸಿಕೊಳ್ಳುವಾಗ ಹೇಳಿದ ನುಡಿಗಳಿವು:

"......ರಾಷ್ಟ್ರದ ಶ್ರೀಸಾಮಾನ್ಯ, ರೈತ ಹಾಗೂ ಕಾರ್ಮಿಕರಿಗೆ ಸ್ವಾತಂತ್ರ್ಯ ಅವಕಾಶಗಳನ್ನೂ ತಂದುಕೊಡುವುದು. ಬಡತನ, ಅಜ್ಞಾನ, ಕಾಯಿಲೆಗಳ ವಿರುದ್ಧ ಹೋರಾಡಿ ಕೊನೆಗಾಣಿಸುವುದು, ಸಮೃದ್ಧ, ಪ್ರಜಾಸತ್ತಾತ್ಮಕ, ಪ್ರಗತಿ ಪರ ರಾಷ್ಟ್ರ ನಿರ್ಮಿಸುವುದು....."

ಆದರೆ ಬ್ರಿಟಿಷ್ ಆಡಳಿತದಿಂದ ಸ್ವಾತಂತ್ರ್ಯ ಪಡೆದು 50 ವರ್ಷಗಳಾದ ನಂತರವೂ, ಸ್ವತಂತ್ರ ಭಾರತ ಸರ್ಕಾರ, ಜನರ ಸಾಮಾನ್ಯ ಸ್ಥಿತಿಗತಿಯ ಬಗ್ಗೆ ಹೇಳುವುದಾದರೂ ಏನನ್ನು?

".....ಸ್ವಾತಂತ್ರ್ಯ ಪಡೆದು 50 ವರ್ಷಗಳಾದರೂ, ಬಡತನ, ಅನಕ್ಷರತೆ, ಕಾಯಿಲೆ, ಕನಿಷ್ಟ ಸಾಮಾಜಿಕ ಸೇವೆಗಳ ಕೊರತೆಗಳು ನಮ್ಮ ಲಕ್ಷಾಂತರ ಜನರನ್ನು ಕಾಡುವುದನ್ನು ಮುಂದುವರಿಸಿದೆ....."

ಸರ್ಕಾರದ್ದೇ ಅಂದಾಜುಗಳ ಪ್ರಕಾರವೂ, 1993-94ರಲ್ಲಿ ಭಾರತದಲ್ಲಿ 320 ದಶಲಕ್ಷಕ್ಕೂ ಅಧಿಕ ಜನರು ಬಡತನ ರೇಖೆಯಿಂದ ಕೆಳಗೆ ಜೀವಿಸುತ್ತಿದ್ದಾರೆ.

ಸ್ವಾತಂತ್ರ್ಯ ಪಡೆದು 53 ವರ್ಷಗಳ ನಂತರ 21ನೇ ಶತಮಾನಕ್ಕೆ ಕಾಲಿರಿಸಿರುವ ಈ ಹೊತ್ತಿನಲ್ಲಿ, ಬಾಹ್ಯಾಕಾಶ ಯುಗ, ಕಂಪ್ಯೂಟರ್‌ಯುಗ, ಮಾಹಿತಿ ತಂತ್ರಜ್ಞಾನ ಯುಗ ಎಂದೆಲ್ಲಾ ಕರೆಯುವ ಈ ಕಾಲದಲ್ಲಿ, ಒಂದೇ ಒಂದು ಪುಟವನ್ನು ಯಾವುದೇ ಭಾರತೀಯ ಭಾಷೆಗಳಲ್ಲಿ ಓದಲು-ಬರೆಯಲು ಬಾರದಂತಹ ಸ್ಥಿತಿಯಲ್ಲಿ ಅರ್ಧದಷ್ಟು ಭಾರತೀಯ ಜನಸಂಖ್ಯೆ ಇದೆ.

ಸಂವಿಧಾನಿಕ ಅಸೆಂಬ್ಲಿಯಲ್ಲಿ ಕರಡು ಸಂವಿಧಾನ ಮಂಡಿಸುತ್ತಾ ಡಾ|| ಬಿ. ಆರ್. ಅಂಬೇಡ್ಕರ್ ಹೇಳಿದ ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳಬೇಕು:

"26ನೇ ಜನವರಿಯಂದು, ವೈರುಧ್ಯಗಳ ಬದುಕನ್ನು ನಾವು ಪ್ರವೇಶಿಸಲಿದ್ದೇವೆ. ರಾಜಕೀಯದಲ್ಲಿ ನಮಗೆ ಸಮಾನತೆಯಿದೆ. ಸಾಮಾಜಿಕ, ಆರ್ಥಿಕ ಬದುಕಿನಲ್ಲಿ ಅಸಮಾನತೆ ಇದೆ. ರಾಜಕೀಯದಲ್ಲಿ ಒಬ್ಬ ವ್ಯಕ್ತಿ ಒಂದು ಮತ, ಒಂದು ಮೌಲ್ಯವನ್ನು ಗುರುತಿಸುತ್ತಿದ್ದೇವೆ. ಸಾಮಾಜಿಕ, ಆರ್ಥಿಕ ಬದುಕಿನಲ್ಲಿ, ಸಾಮಾಜಿಕ-ಆರ್ಥಿಕ ಸ್ವರೂಪದಿಂದಾಗಿ ಒಬ್ಬ ವ್ಯಕ್ತಿಗೆ ಒಂದು ಮೌಲ್ಯವನ್ನು ನಿರಾಕರಿಸುವುದು ಮುಂದುವರಿದಿದೆ.,... ಈ ವೈರುಧ್ಯಗಳ ಬದುಕನ್ನು ಎಷ್ಟು ಕಾಲ ಬದುಕುವುದು? ನಮ್ಮ ಸಾಮಾಜಿಕ-ಆರ್ಥಿಕ ಬದುಕಿನಲ್ಲಿ ಎಲ್ಲಿಯವರೆಗೆ ಸಮಾನತೆಯನ್ನು ನಿರಾಕರಿಸುವುದು?"

ಪ್ರಜಾಸತ್ತೆ ಹಾಗೂ ಸ್ವಾತಂತ್ರ್ಯ ಬರೀ ಚುನಾವಣೆ ನಡೆಸಲು, ಸ್ವಾತಂತ್ರ್ಯ ದಿನದಂದು ಬಾವುಟ ಹಾರಿಸುವಂತಹ ವಿಧಿ ವಿಧಾನಗಳಿಗಷ್ಟೇ ಸೀಮಿತವಾದರೆ, ಬಡತನದಿಂದ ನರಳುತ್ತಿರುವವರಿಗೆ ಅರ್ಥಹೀನವಾಗುತ್ತದೆ.

ಹೆಸರಿಗೆ ಮಾತ್ರ ಪ್ರಜಾಸತ್ತೆ, ಸ್ವಾತಂತ್ರ್ಯದ ಪರಿಣಾಮ ಎಲ್ಲೆಡೆ ಹಿಂಸಾಚಾರ, ಅಪರಾಧ, ಕಾನೂನು ಸುವ್ಯವಸ್ಥೆ ಸಮಸ್ಯೆಗಳಿಗೆ ನಾಂದಿಯಾಗುತ್ತಿದೆ. ಎಲ್ಲೆಡೆ 'ಶತ್ರುಗಳು' ಕಂಡುಬರುತ್ತಾರೆ. 'ನಕ್ಸಲೀಯರು' ಈಶಾನ್ಯ, ಝಾರ್ಖಂಡ್‌ನ ಆದಿವಾಸಿಗಳು; 'ಅಭಿವೃದ್ಧಿ'ಯ ಬಲಿಪಶುಗಳು. ದೊಡ್ಡ ಅಣೆಕಟ್ಟುಗಳಿಗಾಗಿ (ನರ್ಮದಾದ ಸರ್ದಾರ್ ಸರೋವರ), ವಿದ್ಯುತ್ ಉತ್ಪಾದನಾ ಯೋಜನೆಗಳಿಗಾಗಿ (ಎನ್ರಾನ್ ಹಾಗೂ ಕೊಜೆಂಟ್ರಿಕ್ಸ್), ರಕ್ಷಣಾ ಯೋಜನೆಗಳಿಗಾಗಿ (ಸೀಬರ್ಡ್) ಹಾಗೂ ಪ್ರಾಣಿಗಳ ರಕ್ಷಣೆಗೆ ನ್ಯಾಷನಲ್ ಪಾರ್ಕ್‌ಗಳಿಗಾಗಿ (ನಾಗರಹೊಳೆ ನ್ಯಾಷನಲ್ ಪಾರ್ಕ್) ಸ್ಥಳಾಂತರಗೊಂಡ ಬಡವರು, ಆದಿವಾಸಿಗಳು ನಗರದ ಕೊಳಚೆ ಪ್ರದೇಶಗಳಲ್ಲಿ ಆಶ್ರಯ ಪಡೆಯುವುದು ಅನಿವಾರ್ಯವಾಗುತ್ತದೆ; ನಗರಗಳ ವಲಸೆ ಕಾರ್ಮಿಕ ಶಕ್ತಿಯ ಭಾಗವಾಗಿ ಹೋಗುತ್ತಾರೆ ಈ 'ಪ್ರಗತಿ'ಯ ಬಲಿಪಶುಗಳು.

ಈ ಅಣಕು ಸ್ವಾತಂತ್ರ್ಯ ಹಾಗೂ ಪ್ರಜಾಸತ್ತೆ ಉಳಿವಿಗಾಗಿ ಆಡಳಿತಗಾರರು ನಮ್ಮೊಳಗೇ ಶತ್ರುಗಳನ್ನು ಹುಡುಕುತ್ತಾರೆ. ಕೆಲವೊಮ್ಮೆ ಇದು ಸಿಖ್ ಭಯೋತ್ಪಾದಕರು, ಮುಸ್ಲಿಂ ಮೂಲಭೂತವಾದಿಗಳು, ಮತಾಂತರ ಮಾಡುವ ಕ್ರೈಸ್ತರು, ಕೆಲವೊಮ್ಮೆ ಈ ಶತ್ರುಗಳು ದಕ್ಷತೆ, ಅರ್ಹತೆ ನಾಶಪಡಿಸುವಂತಹ ಪರಿಶಿಷ್ಟ ಜಾತಿ, ವರ್ಗದವರಾಗಿ ಬಿಡುತ್ತಾರೆ. ಕೆಲವೊಮ್ಮೆ

ಕನ್ನಡಿಗರಿಗೆ ತಮಿಳು, ದೆಹಲಿ ವಾಲಿಗಳಿಗೆ ಬಿಹಾರಿಗಳು, ಮುಂಬೈವಾಲಾಗಳಿಗೆ ಮರಾಠಿಗರಲ್ಲದವರು ಶತ್ರುಗಳಾಗುತ್ತಾರೆ.

ಭಾರತದ ಜನತೆ ಬ್ರಿಟಿಷ್ ಆಳ್ವಿಕೆಯಿಂದ ವಿಮೋಚನೆ ಬಯಸಿದ್ದಾದರೂ ಯಾಕೆ? ಘನತೆವೆತ್ತ ಬದುಕಿಗಾಗಿ ಹಾಗೂ ಎಲ್ಲಾ ಭಾರತೀಯರಿಗೂ ಒಂದೇ ಗುಣಮಟ್ಟದ ಬದುಕಿಗಾಗಿ.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಎರಡು ಮುಖ್ಯ ವಾಹಿನಿಗಳಿದ್ದವು. ಒಂದು ಮಹಾತ್ಮ ಗಾಂಧಿ ನೇತೃತ್ವದ ಅಹಿಂಸಾತ್ಮಕ ಚಳವಳಿ. ಎರಡನೆಯದು ಭಗತ್‌ಸಿಂಗ್, ಚಂದ್ರಶೇಖರ ಆಜಾದ್, ಸುಭಾಷ್ ಚಂದ್ರ ಬೋಸ್ ಮುಂತಾದವರನ್ನು ಒಳಗೊಂಡಂತಹ ಸಶಸ್ತ್ರ ಹೋರಾಟ. ಈ ಎರಡರ ಹಾದಿ ಭಿನ್ನವಾಗಿದ್ದರೂ ಗುರಿ ಒಂದೇ ಆಗಿತ್ತು. ಅದು ಸಮಾನತೆಯ ಬದುಕಿನ ರಾಮರಾಜ್ಯ ಆದರೆ ಸಾಕ್ಷರತೆ, ಶಿಶುಮರಣ, ಬಡತನ ನಿವಾರಣೆ ಇತ್ಯಾದಿ ಕ್ಷೇತ್ರಗಳಲ್ಲಿ ಹೇಳಿಕೊಳ್ಳುವ ಸಾಧನೆ ಇನ್ನೂ ಆಗದಿರುವುದು ವಿಪರ್ಯಾಸ. ಈ ದಿಸೆಯಲ್ಲಿನ ಒಟ್ಟಾರೆ ಅಂಕಿ ಅಂಶಗಳನ್ನು ಪರಿಶೀಲಿಸಿದಲ್ಲಿ, ಭಾರತದ ಬಹುತೇಕ ಶೇಕಡಾ 50 ರಷ್ಟು ಭಾರತೀಯ ನಾಗರಿಕರಿಗೆ ಇನ್ನೂ ಘನತೆವೆತ್ತ ಮಾನವ ಅಸ್ತಿತ್ವ ಲಭಿಸಿಲ್ಲ ಎಂಬುದು ಸೂರ್ಯಸ್ಪಷ್ಟ.

'ನಮ್ಮದು ಜಗತ್ತಿನಲ್ಲೇ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರ', 'ಕಳೆದ 5 ದಶಕಗಳಲ್ಲಿ ಏಷ್ಯಾ ಹಾಗೂ ಆಫ್ರಿಕಾ ಖಂಡಗಳಲ್ಲಿ ಭಾರತ ಸ್ಥಿರವಾದ ಏಕೈಕ ಪ್ರಜಾಸತ್ತಾತ್ಮಕ ರಾಷ್ಟ್ರವಾಗಿ ಹೊರ ಹೊಮ್ಮಿದೆ' ಎಂಬಂತಹ ಮಾತುಗಳನ್ನು ಕೇಳುತ್ತಲೇ ಇರುತ್ತೇವೆ. ಆದರೆ ಬಡತನ ರೇಖೆಗಿಂತ ಕೆಳಗಿರುವ ಜನಸಂಖ್ಯೆ, ಚೀನಾ, ಪಾಕಿಸ್ತಾನ, ಶ್ರೀಲಂಕಾ ಹಾಗೂ ನೇಪಾಳಗಳಿಗೆ ಹೋಲಿಸಿದಲ್ಲಿ ಭಾರತದಲ್ಲೇ ಹೆಚ್ಚು ಎಂಬುದನ್ನು ಅಂಕಿ ಅಂಶಗಳು ಸ್ಪಷ್ಟಪಡಿಸಿದೆ. ಬಡತನ ನಿವಾರಣೆ ವೈಫಲ್ಯಕ್ಕೆ ಪ್ರಜಾಸತ್ತೆ ಕಾರಣವಲ್ಲ; ಪ್ರಜಾಸತ್ತೆ ವ್ಯವಸ್ಥೆಯಲ್ಲಿ ಆಡಳಿತ ನಡೆಸಲು ಆಯ್ಕೆಯಾಗುವ ವ್ಯಕ್ತಿಗಳ ವೈಫಲ್ಯ ಇದಕ್ಕೆ ಕಾರಣ ಎಂಬಂತಹ ವಿಶ್ಲೇಷಣೆಗಳನ್ನು ಮಾಡಲಾಗುತ್ತದೆ.

ಸಾಮಾಜಿಕ ಹಾಗೂ ಆರ್ಥಿಕ ಪ್ರಜಾಸತ್ತೆ ಇಲ್ಲದಂತಹ ಬರೀ ರಾಜಕೀಯ ಪ್ರಜಾಸತ್ತೆ ಯಾವಾಗಲೂ ಅಸ್ಥಿರವಾಗಿಯೇ ಉಳಿಯುತ್ತದೆ ಎಂಬುದನ್ನು ನೆನಪಿಡಬೇಕು. ಸಂವಿಧಾನದ ಮೂಲಭೂತ ಹಕ್ಕುಗಳು ಹಾಗೂ ರಾಜ್ಯ ನೀತಿಯ ಮಾರ್ಗದರ್ಶಿ ತತ್ವಗಳು, ಜನತೆಯ ಮಾನವೀಯ, ಘನತೆಯ ಬದುಕಿಗೆ ರಕ್ಷಣೆ ಒದಗಿಸುತ್ತದೆ. ಆದರೆ ವಾಸ್ತವದಲ್ಲಿ ಹಲವು ಸಂದರ್ಭದಲ್ಲಿ ಈ ತತ್ವಗಳ ಉಲ್ಲಂಘನೆಯಾಗಿರುವುದು ನಿಚ್ಚಳ ಯಾವುದೇ ಅನ್ಯಾಯವೂ ನ್ಯಾಯಕ್ಕೆ ಎಲ್ಲೆಡೆ ಬೆದರಿಕೆ ಒಡ್ಡುತ್ತದೆ. ಪ್ರಜಾಸತ್ತೆ, ಶಾಂತಿಗೂ ಇದರಿಂದ ಧಕ್ಕೆಯಾಗುತ್ತದೆ.

ಬಡತನ ನಿವಾರಣೆಗಾಗಿ ಸರ್ಕಾರದಲ್ಲಿ ಸಾಕಷ್ಟು ಯೋಜನೆ, ಕಾರ್ಯಕ್ರಮಗಳಿವೆ. ಪ್ರತಿ ವರ್ಷ ಕೇಂದ್ರ ರಾಜ್ಯ ಸರ್ಕಾರಗಳು ಇದಕ್ಕಾಗಿ ಸಬ್ಸಿಡಿಗಳನ್ನು ತೆಗೆದಿರಿಸುತ್ತದೆ. ಆದರೆ ಈ ಎಲ್ಲಾ ಪ್ರಯತ್ನಗಳ ಮಧ್ಯೆಯೂ, 'ಅಧಿಕೃತ' ಬಡತನ ರೇಖೆಗಿಂತ ಕೆಳಗಿರುವವರ ಸಂಖ್ಯೆ 1951ರಲ್ಲಿ 165 ದಶಲಕ್ಷ ಇದ್ದದ್ದು 1993-94ರಲ್ಲಿ 320 ದಶಲಕ್ಷಕ್ಕಿಂತ ಹೆಚ್ಚಿದೆ.

ಭಾರತದಲ್ಲಿ ಬಡತನ ನಿವಾರಣೆಗೆ ಹೆಚ್ಚಿನ ಉದ್ಯೋಗ ಅವಕಾಶ ಹಾಗೂ ತೀವ್ರಗತಿಯ ಆರ್ಥಿಕ ಬೆಳವಣಿಗೆ- ಎರಡು ಮುಖ್ಯ ಮಾರ್ಗಗಳು ಎಂದು ಹಲವು ಅರ್ಥಶಾಸ್ತ್ರಜ್ಞರು, ಯೋಜನಾಕಾರರು ಹಾಗೂ ರಾಜಕೀಯ ಪಕ್ಷಗಳು ವಾದಿಸುತ್ತವೆ. ಆದರೆ ಅಂಕಿ ಅಂಶಗಳನ್ನು ಗಮನಿಸಿದಲ್ಲಿ ಇದು ಯಾವಾಗಲೂ ಸತ್ಯವಾಗುವುದಿಲ್ಲ. ಕಡಿಮೆ ಪ್ರಮಾಣದ ದುಡಿಯುವ ಜನರಿದ್ದರೂ, ಅವರ ಕೆಲಸಕ್ಕೆ ಸಿಗುವ ಸಾಕಷ್ಟು ವೇತನದಿಂದ ಬಡತನ ನಿವಾರಣೆಯಾಗುತ್ತದೆ. ಹೀಗಾಗಿ ವೇತನದ ಪ್ರಶ್ನೆ ಇಲ್ಲಿ ಮುಖ್ಯವಾಗುತ್ತದೆ.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸಾಮೂಹಿಕ ತೀವ್ರ ಬಡತನಕ್ಕೆ ನಿಜವಾದ ಕಾರಣ, ಕೆಲಸ ಮಾಡಲು ಬಡವರಿಗೆ ಇಷ್ಟವಿಲ್ಲದಿರುವುದು ಕಾರಣವಲ್ಲ. ಅವರನ್ನು ಕೆಲಸಕ್ಕೆ ನೇಮಕ ಮಾಡಿಕೊಳ್ಳುವವರು ಸೂಕ್ತ ವೇತನ ನೀಡದಿರುವುದು ಮುಖ್ಯ ಕಾರಣ. ಹೀಗಾಗಿ ಮಾರಲು ಶ್ರಮ ಶಕ್ತಿ ಮಾತ್ರ ಹೊಂದಿರುವಂತಹ ಕಾರ್ಮಿಕರು, ತಮ್ಮ ಕುಟುಂಬದವರೊಡನೆ ಘನತೆವೆತ್ತ ಮಾನವೀಯ ಅಸ್ತಿತ್ವ ಹೊಂದಲು ಸೂಕ್ತ ವೇತನ ಪಡೆದು ಕೊಳ್ಳಬೇಕು.

ಸಾಕಷ್ಟು ಸಂಪನ್ಮೂಲಗಳು ಲಭ್ಯವಿದ್ದರೂ, ಸೂಕ್ತ ವೇತನದಲ್ಲಿ ಕೆಲಸದ ಹಕ್ಕನ್ನು ವಾಸ್ತವವಾಗಿಸುವಂತಹ ಸಂವಿಧಾನಿಕ ಬದ್ಧತೆಯನ್ನು ಕಾರ್ಯಗತಗೊಳಿಸುವಲ್ಲಿ ಭಾರತ ಸರ್ಕಾರ ಸಾಕಷ್ಟು ಪ್ರಯತ್ನಗಳನ್ನು ಮಾಡಿಲ್ಲದಿರುವುದೂ ಹಲವು ಉದಾಹರಣೆ ಗಳಲ್ಲಿ ವ್ಯಕ್ತವಾಗುತ್ತದೆ. ಬಡತನ ನಿವಾರಣೆ ಪ್ರಕ್ರಿಯೆಯಲ್ಲಿ ಅಗತ್ಯ ವೇತನದಲ್ಲಿ ಎಲ್ಲರಿಗೂ ಕೆಲಸದ ಹಕ್ಕನ್ನು ಒದಗಿಸಲು ಸಂಪನ್ಮೂಲಗಳ ಕೊರತೆ ಇದೆ ಎಂಬುದು ಸರಿಯಲ್ಲ. ಆದರೆ ಇಚ್ಛಾಶಕ್ತಿ ಕೊರತೆ, ಅದಕ್ಷತೆ ಹಾಗೂ ಆಡಳಿತಗಾರರ ದುರಾಡಳಿತ ಬಡತನ ನಿವಾರಣೆಯ ವೈಫಲ್ಯಕ್ಕೆ ಕಾರಣ.

●

# ಲಿಂಗ - ಬಡತನ ಮತ್ತು ಮಹಿಳಾಭಿವೃದ್ಧಿ

ಮಹಿಳೆಯರ ಮೂಲಭೂತ ಹಕ್ಕುಗಳಾದಂತಹ - ಜೀವನದಲ್ಲಿ ಅಥವಾ ಬದಕಿನಲ್ಲಿ ಸ್ವಾಯತ್ತತೆ ಪಡೆಯುವುದು, ಕುಟುಂಬದಲ್ಲಿ ತೀರ್ಮಾನ ತೆಗೆದುಕೊಳ್ಳುವ ಶಕ್ತಿ, ಮತ್ತು ಸಂಪನ್ಮೂಲಗಳ ಮೇಲಿನ ಹಿಡಿತ, ಈ ಮೂರೂ ಅಂಶಗಳು. ಸಮಾಜದಲ್ಲಿ ಅವರ ಈ ಎಲ್ಲಾ ಹಕ್ಕುಗಳೂ ಲಿಂಗ ಸಂಬಂಧೀ ವಿಚಾರಕ್ಕೆ ಬಂದಾಗ ಬಹುಶಃ ಈ ಮೂರೂ ಅಂಶಗಳನ್ನು ಅವರಿಂದ ಕಿತ್ತುಕೊಂಡಿರುವುದೇ ಅಥವಾ ಅಪಹರಿಸಿರುವುದೇ ಮಹಿಳೆಯರ ಅಸಮಾನತೆಗೆ ಮುಖ್ಯ ಕಾರಣವಾಗಿ ಕಂಡುಬರುತ್ತದೆ.

ಸಾಮಾಜಿಕ ಸಮಾನತೆ, ಆರ್ಥಿಕ ಸಮಾನತೆ, ಹಾಗೂ ರಾಜಕೀಯ ಸಮಾನತೆಯ ವಿಚಾರಕ್ಕೆ ಬಂದಾಗ, ಮೇಲ್ನೋಟಕ್ಕೆ ಅವುಗಳೆಲ್ಲವೂ ಮಹಿಳೆಯರಿಗೆ ಲಭಿಸಿವೆ. ಅಥವಾ ಲಭಿಸುತ್ತಿವೆ ಎಂದು ಹೇಳಬಹುದಾದರೂ, ಅದೇ ಪ್ರತಿಯೊಂದು ಕುಟುಂಬದ ಒಳಹೊಕ್ಕು ನೋಡಿದಾಗ ಅಷ್ಟೇ ಸತ್ಯಾಂಶ ಹೊರಬೀಳುತ್ತದೆ. ಬಹುಶಃ ಈ ಮೂರೂ ಅಂಶಗಳನ್ನು ಒಳಗೊಂಡಂತೆ ಯಾವುದೇ ಒಂದು ಕುಟುಂಬದಲ್ಲಿ ಮಹಿಳೆ ಮತ್ತು ಪುರುಷರಿಬ್ಬರ ನಡುವೆ ಘರ್ಷಣೆಗಳು, ಕಲಹಗಳು ಭಿನ್ನಾಭಿಪ್ರಾಯಗಳೂ ನಡೆಯುತ್ತಿರುವುದು ಇವತ್ತಿಗೂ ಸರ್ವೇಸಾಮಾನ್ಯವಾಗಿದೆ. ಗ್ರಾಮೀಣ ಬಡ ಕುಟುಂಬಗಳಿಂದ ಹಿಡಿದು, ನಗರದ ವಿದ್ಯಾವಂತ ಮಹಿಳೆಯರವರೆಗೂ ಯೋಚಿಸುವಾಗ, ಒಂದಲ್ಲ ಒಂದು ಕಾರಣಗಳಿಗಾಗಿ ಹೆಚ್ಚುತ್ತಿರುವ ಕೌಟುಂಬಿಕ ಕಲಹಗಳು, ವಿವಾಹ ವಿಚ್ಛೇದನಗಳು ಘರ್ಷಣೆಗಳು, ದೌರ್ಜನ್ಯಗಳು, ಈ ಲಿಂಗ ಸಂಬಂಧೀ ಶಕ್ತಿಗಳ ಮಧ್ಯೆ ಸೃಷ್ಟಿಸುವ ಅಸಮಾನತೆಗೆ ಪ್ರಮುಖ ಕಾರಣಗಳೆಂದು ಹೇಳಬೇಕಾಗುತ್ತದೆ. ಯಾವುದೇ ಒಂದು ಹೆಣ್ಣು ತಾನು ಬದುಕಿರುವುದು ಬೇರೊಬ್ಬರ ಆಶ್ರಯದಲ್ಲಿ ಮಾತ್ರ ಎಂಬಂತಹ ಭ್ರಮೆಗಳಿಂದ ಹೊರಬಂದು, ತಮ್ಮ ಹಕ್ಕುಗಳ ಅರಿವಿನ, ಅಥವಾ ಸಮಾನತೆಯ ಬಗೆಗೆ ಪ್ರಶ್ನೆ ಮಾಡಿದಾಗ ಸಹಜವಾಗಿ ಕುಟುಂಬದಲ್ಲಿ ಘರ್ಷಣೆಗಳು ಪ್ರಾರಂಭವಾಗುತ್ತವೆ. ಇದು ಸಾಮಾನ್ಯವಾಗಿ ವರ್ಗ, ಜಾತಿ, ಎಂಬ ತಾರತಮ್ಯವಿಲ್ಲದೆ ನಡೆಯುವ ಸಾಮಾನ್ಯ ಅಂಶಗಳಾಗಿ ಕಂಡುಬರುತ್ತವೆ.

ಇಂತಹ ಮೂಲಭೂತ ವಿಚಾರಗಳ ಬಗ್ಗೆ ಅರಿವಿಲ್ಲದೆ ಒಂದು ಕಡೆ ಮಹಿಳೆಯರು ತುಳಿತಕ್ಕೆ ಒಳಗಾದರೆ, ಮತ್ತೊಂದು ಕಡೆ, ಈ ಎಲ್ಲಾ ಅಂಶಗಳನ್ನು ಅರಿತೂ, ಸಾಮಾಜಿಕ ಕಟ್ಟುಪಾಡುಗಳಿಗೆ ಹೆದರಿ ತಮ್ಮ ತನವನ್ನೇ ಮರೆತು ಬದುಕು ನಡೆಸುವವರು ಒಂದು ಕಡೆಯಾದರೆ; ಮೂರನೆಯ ವರ್ಗಕ್ಕೆ ಬರುವವರು ಈ ಲಿಂಗ ಅಸಮಾನತೆಗೆ ಕಾರಣವಾಗುವ ವಿಚಾರಗಳ ಬಗ್ಗೆ ಪ್ರಶ್ನಿಸುವ ಹಾಗೂ ಇದರ ವಿರುದ್ಧ ಸಿಡಿದೆದ್ದು, ಹೋರಾಟ ಮಾಡುವವರು ಮತ್ತೊಂದು ಕಡೆ. ಇವು ಯಾವುದೇ ಸಮಾಜದಲ್ಲೂ ಈ ಮೂರೂ ಗುಂಪುಗಳು ಸಹಜವಾಗೇ ಕಂಡುಬರುತ್ತವೆ.

ಸಾಮಾನ್ಯವಾಗಿ ಮಹಿಳೆಯರ ಹಿಡಿತದಲ್ಲಿರುವ (Control over resources) ಸಂಪನ್ಮೂಲಗಳು ಸಾಮಾಜಿಕ ಮತ್ತು ಆರ್ಥಿಕ ಸಾಮರ್ಥ್ಯಗಳ ಮೇಲೆ ನಿರ್ಧಾರಿತವಾಗುತ್ತವೆ. ಅಥವಾ ಅವರು ಪಡೆದುಕೊಳ್ಳುವ ಸಾಮರ್ಥ್ಯವನ್ನು ನಿರ್ಧರಿಸುತ್ತದೆ. ಅಂದಾಗ ಆಯಾ ಸಮಾಜದಲ್ಲಿನ ಜಾತಿ ಮತ್ತು ವರ್ಗ ಕೂಡ ಪರಿಗಣನೆಗೆ ಬರುತ್ತದೆ. ಆ ಸಂದರ್ಭದಲ್ಲಿ ಮಹಿಳೆಯರು ಸಮಾನತೆ ಬಗ್ಗೆ ಮಾತನಾಡುವಾಗ ಸಾಮಾಜಿಕ ವರ್ಗ ಜಾತಿ ಇವುಗಳ ಜೊತೆಗೆ-ಲಿಂಗ ವಿಚಾರವೂ ಸೇರಿಕೊಂಡು ಮಹಿಳೆಯರನ್ನು ಆತಂಕಕ್ಕೆ ಈಡುಮಾಡುತ್ತವೆ.

ಕುಟುಂಬದಲ್ಲಿ ಮಹಿಳೆಯರು ಬಡತನದಲ್ಲಿ ಅತ್ಯಂತ ಹೆಚ್ಚಿನ ಬಡತನವನ್ನು ಅನುಭವಿಸುವವರಾಗಿದ್ದಾರೆ. (Poorest of the poor) ಸಾಮಾಜಿಕ, ಸಾಂಸ್ಥಿಕ ಅಡ್ಡಿಗಳಿಂದಾಗಿ (Soeictal and institutional barriers) ಮಹಿಳೆಯರ ಅವಶ್ಯಕತೆಗಳನ್ನು ಪೂರೈಸುವಲ್ಲಿ, ವಿದ್ಯಾಭ್ಯಾಸ ಆರೋಗ್ಯ ವಿಚಾರಗಳೇ ಅಲ್ಲದೆ, ಕುಡಿಯುವ ನೀರು, ಉರುವಲು ಸಂಗ್ರಹಣೆ ಮತ್ತು ನೈರ್ಮಲ್ಯದ ಅಭಾವ, ಉದ್ಯೋಗ ಮತ್ತು ವರಮಾನ ಹಾಗೂ ಸಂಪನ್ಮೂಲಗಳು ಅಸಾಮರ್ಥ್ಯತೆಯನ್ನು ಹೊಂದಿರುವುದೇ ಆಗಿದೆ.

ಇಂದು ಸಾಕಷ್ಟು ಪ್ರಮಾಣದಲ್ಲಿ ದೊರೆಯದ ಸಂಪನ್ಮೂಲಗಳಾದ ನೀರು, ಅಡಿಗೆಗೆ ಬೇಕಾದ ಉರುವಲುಗಳು, ನೈರ್ಮಲ್ಯತೆ ಅವರ ಸ್ವಂತ ದುಡಿತದ ಸಂಪಾದನೆ, ಇದೆಲ್ಲವೂ ಬಹುಶಃ ಮಹಿಳೆಯರ ಪಾಲಿಗೆ ಸಂದಿಗ್ಧ ಪರಿಸ್ಥಿತಿಯನ್ನುಂಟು ಮಾಡುವ ಹಾಗೂ ಅಷ್ಟೇ ವಿಮರ್ಶಾತ್ಮಕ ವಿಚಾರಗಳಾಗಿ ಕಂಡುಬರುತ್ತವೆ. ಏಕೆಂದರೆ ಲಿಂಗ ಸಂಬಂಧೀ ವಿಚಾರಗಳನ್ನು ಸಮಾನತೆಯ ದೃಷ್ಟಿಯಿಂದ ವಿಚಾರ ಮಾಡಲು ಹೊರಟರೆ ಸಾಕಷ್ಟುಮಟ್ಟಿಗೆ ಬಡತನದ ಜೊತೆಗೆ, ಅಸಮಾನತೆಯ ಜೊತೆಗೆ ಹೆಚ್ಚಿನ ಜವಾಬ್ದಾರಿಗಳನ್ನು ಕೂಡ ಅವರು ನಿರ್ವಹಿಸುವುದು (ಹೊಂದಿರುವುದು) ಕಂಡುಬರುತ್ತದೆ. ಈ ಎಲ್ಲಾ ಅಂಶಗಳೂ ಕೂಡ gender-power-relations ಎಷ್ಟರ ಮಟ್ಟಿಗೆ ಮಹಿಳೆಯರು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡಿದ್ದಾರೆಂಬುದು ಮನವರಿಕೆಯಾಗುತ್ತದೆ.

ಲಿಂಗದ ಆಧಾರದ ಮೇಲೆ ವಿಭಜಿಸಲಾದ (gender-division of labour) ಹಲವಾರು ಕುಟುಂಬದ ಕೆಲಸಗಳಿಂದ

ಹಿಡಿದೂ, ಮನೆಯ ಹೊರಗೂ ದುಡಿಯುವ ಮಹಿಳೆಯರು ಮತ್ತು ಅವರ ಸಮಸ್ಯೆಗಳು, ಅಲ್ಲದೆ ಸಾಕಷ್ಟು ನೀರಿನ ಸೌಲಭ್ಯವಿಲ್ಲದಿರುವುದು (ಕೊರತೆ) ಹಾಗೂ ನೈರ್ಮಲ್ಯದ ಅಭಾವ ಪುರುಷರಿಗಿಂತ ಹೆಚ್ಚಾಗಿ ಮಹಿಳೆಯರ ಆರೋಗ್ಯದ ಮೇಲೆ ಹೆಚ್ಚಿನ ಪರಿಣಾಮ ಬೀರುತ್ತದಲ್ಲದೆ, ಮಹಿಳೆಯ Reproductive healthನ ಮೇಲೂ ಹೆಚ್ಚಿನ ಪರಿಣಾಮ ಬೀರುವಂತಾದ್ದಾಗಿದೆ. ಅಲ್ಲದೆ ಇತ್ತೀಚೆಗೆ ಪರಿಸರ ಮಾಲಿನ್ಯ, ನೀರಿನ ಅಭಾವ, ಅರಣ್ಯಗಳ ನಾಶ ಈ ಸಾಮಾನ್ಯ ಸಂಪನ್ಮೂಲಗಳ ಅಭಾವ ಇವೆಲ್ಲವೂ ಸೇರಿ ಮಾನವನ ಅಭಿವೃದ್ಧಿಯ ಮೇಲೆಯೇ ವ್ಯತಿರಿಕ್ತವಾದ ಪರಿಣಾಮ ಬೀರುವಂತಹವುಗಳಾಗಿದ್ದು, ಅದರಲ್ಲೂ ಮಹಿಳೆಯರ ಮೇಲೆ ಅತ್ಯಂತ ಹೆಚ್ಚಿನ ರೀತಿಯಲ್ಲಿ ವ್ಯತಿರಿಕ್ತವಾದ ಪರಿಸರವನ್ನೇ ನಿರ್ಮಾಣ ಮಾಡುತ್ತಿದೆ. ಅದರಲ್ಲೂ ವಿಶೇಷವಾಗಿ ಗ್ರಾಮೀಣ ಪ್ರದೇಶದ ಬಡಮಹಿಳೆಯರ ಮೇಲೆ ಇನ್ನೂ ಹೆಚ್ಚಿನ ಪರಿಣಾಮ ಬೀರುವಂತಹದ್ದಾಗಿದೆ.

ಬೀನಾ ಅಗಲವಾಲರ ಅಧ್ಯಯನದ ಪ್ರಕಾರ ಭಾರತದ ದೇಶದಲ್ಲಿನ ಬಡತನವು ಲಿಂಗ ಮತ್ತು ಪರಿಸರ ಹಾಗೂ ಬಡತನಗಳ ನಡುವಿನ ಪರಸ್ಪರ ಸಂಬಂಧಗಳ ಪರಿಣಾಮಗಳನ್ನು ಒಂದು ಕಡೆ ಪಟ್ಟಿ ಮಾಡುತ್ತಾ (List) ಹೋದಂತೆ, ಅದರಲ್ಲೂ ಗ್ರಾಮೀಣ ಮಹಿಳೆಯರು ಈ ಪಟ್ಟಿಯಲ್ಲೇ ಹೆಚ್ಚು ಸೇರುತ್ತಾರೆ ಎಂದಿದ್ದಾರೆ.

ಮಹಿಳೆಯರು-ಉರುವಲು ಸಂಗ್ರಹ, ನೀರು ಹಾಗೂ ಪ್ರಾಣಿಗಳಿಗೆ ಸಂಗ್ರಹಿಸುವ ಮೇವುಗಳು ಮೊದಲ್ಗೊಂಡು, ಈ ಎಲ್ಲಾ ಕೆಲಸಗಳಲ್ಲೂ ಪ್ರಾಥಮಿಕವಾಗಿ ಇವರೇ ಕಂಡುಬರುತ್ತಾರೆ. ಹೀಗಾಗಿ ಇವೆಲ್ಲಾ ಜವಾಬ್ದಾರಿಗಳು ಅವರ ದಿನದ ದುಡಿಮೆಯ ಕಾಲಾವಧಿಯನ್ನು ಹೆಚ್ಚಿಸುವುದಲ್ಲದೆ, (depletion reduced access to forests, water and land) ಬಳಸಬಹುದಾಗುತ್ತದೆ. ಇದರ ಬದಲಾಗಿ ಜೀವನದ ಅತ್ಯಂತ ಹೆಚ್ಚಿನ ಅವಧಿ ಹಾಗೂ ಅವರ ಶ್ರಮವು ಬರೇ ಉರುವಲು, ಆಹಾರ, ನೀರು, ಸಂಗ್ರಹಿಸುವಲ್ಲೆ ವ್ಯಯವಾಗುವುದಾದಲ್ಲಿ ಅವರ ಆರೋಗ್ಯದ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವ ಮೂಲಕ ಮಹಿಳೆಯರಲ್ಲಿ ಅಪೌಷ್ಠಿಕಾಂಶದ ಮಟ್ಟ ಹೆಚ್ಚುತ್ತದೆ. ಅದರಲ್ಲೂ ಬಡತನದ ಕುಟುಂಬದ ಮಹಿಳೆಯರನ್ನು ಹೆಚ್ಚಾಗಿ ಕಾಡುತ್ತದೆ. ಆಗ ಅವರು ಉಳಿವಿನ ಬಗ್ಗೆ ಹೋರಾಟ ಮಾಡುವ ಬದಲು-ಇಡೀ ಪ್ರಪಂಚದಿಂದಲೇ ಕಣ್ಮರೆಯಾಗುವ ಸಾಧ್ಯತೆಗಳು ಹೆಚ್ಚಾಗುತ್ತವೆ.

ಇವಕ್ಕೆಲ್ಲಾ ಮುಖ್ಯ ಕಾರಣಗಳೆಂದರೆ-ಮುಖ್ಯವಾಗಿ ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಿ ಕುಟುಂಬದಲ್ಲಿ ವಿಭಾಗಿಸಲ್ಪಟ್ಟಿರುವ ಜೀವನಾವಶ್ಯಕ. ಸಂಪನ್ಮೂಲಗಳೆಲ್ಲವೂ ಮಹಿಳಾ ವಿರುದ್ಧದ ತಾರತಮ್ಯ ನೀತಿಯನ್ನೇ ಹೇಳುವಂತಹ ಪುರುಷರ ಅಧೀನದಲ್ಲಿರುವುದೇ ಆಗಿದೆ. ಇಂದಿಗೂ ಎಲ್ಲಿ ಮಹಿಳೆಯರು ಕುಟುಂಬದ ಸಂಪನ್ಮೂಲಗಳಲ್ಲಿ ಸಮಾನತೆ, ಹಿಡಿತ ತೆಗೆದುಕೊಂಡಿರುವರೋ ಅಥವಾ ಹೊಂದಿರುವರೋ ಅಂತಹ ಕುಟುಂಬಗಳಲ್ಲಿ ಮಾತ್ರ ಈ ಲಿಂಗ ಸಂಬಂಧಿ ಶಕ್ತಿಯ ಹಿಡಿತದಿಂದ ಅವರು ಹೊರತಾಗುವುದು ಕಂಡುಬರುತ್ತದೆ. ಅಂತಹ ಮಹಿಳೆಯರ ಸ್ಥಾನಮಾನವೂ ಕುಟುಂಬದಲ್ಲಿ ಸಮಾನತೆಯಿಂದ ಕೂಡಲೂ ಸಾಧ್ಯವಿರುತ್ತದೆ. ಹಾಗೆಯೇ ಅವರು ತಾವು ಗಳಿಸಿದ ಆದಾಯವೆಲ್ಲವೂ ಕುಟುಂಬದ ಮೂಲಭೂತ ಅವಶ್ಯಕತೆಗಳನ್ನು ಪೂರೈಸಲು ವ್ಯಯ ಮಾಡುವುದು ಕಂಡುಬರುತ್ತದೆ. ಅದೇ ಪುರುಷರು ಆದಾಯವನ್ನು ಹೆಚ್ಚಿನ ಭಾಗ ತಮ್ಮ ವೈಯಕ್ತಿಕ ವಿಚಾರಗಳಿಗೆ ಬಳಸಿಕೊಳ್ಳುತ್ತಾರೆ. ಇವೆಲ್ಲವುಗಳ ಅರ್ಥವೆಂದರೆ -

ಮಹಿಳೆಯರಿಗೆ ಇರುವ ಪರಿಸರದಲ್ಲೆ, ನೀರಿನ, ವಸತಿಯ ಸೌಲಭ್ಯವಾಗಲಿ, ಶೌಚಾಲಯ ಮುಂತಾದುವುಗಳ ಕಡೆ - ಪರಿಸರದ ದೃಷ್ಟಿಯಿಂದ, ಹೆಚ್ಚಿನ ಗಮನ ಹರಿಸಿ ಅಂತಹ ಕಾರ್ಯಕ್ರಮಗಳಿಗೆ ಮಹತ್ವ ಕೊಟ್ಟು ಫಲಪ್ರದವಾದಲ್ಲಿ - 'ಮಾನವಾಭಿವೃದ್ಧಿಗೆ' ಒಂದು ಅರ್ಥ ಬರುತ್ತದೆ. ಅಲ್ಲದೆ ದುಡಿಮೆಯ ಪರಿಕಲ್ಪನೆ ಮತ್ತು ಆದಾಯ ಇವುಗಳು ಸಂಪೂರ್ಣ ಮಹಿಳೆಯರ ವಿಚಾರದಲ್ಲಿ ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಹಿಡಿಯಲ್ಪಟ್ಟ (ಕಟ್ಟುಬಿದ್ದ) ಲಿಂಗ ತಾರತಮ್ಯತೆಗೆ ಬಲಿಯಾಗುವುದರಿಂದ ಮಹಿಳೆಯರ ಅಭಿವೃದ್ಧಿಯಾಗಲೀ ಮಹಿಳೆಯರ ಸಶಕ್ತೀಕರಣಕ್ಕೆ ಅರ್ಥವಿರುವುದಿಲ್ಲ. ಲಿಂಗ-ಸಮಾನತೆ ಕಂಡುಕೊಳ್ಳಬೇಕಾದರೆ ಸಾಮಾಜಿಕ ಹುತ್ತು ಸಾಂಸ್ಕೃತಿಕವಾಗಿ ಮಹಿಳೆಯರ ಮೇಲೆ ಹೇರಲ್ಪಟ್ಟ ಲಿಂಗ ಸಂಬಂಧಿಶಕ್ತಿಗಳ ಹಿಡಿತದಿಂದ ಬಿಡಿಸಿಕೊಂಡಾಗ ಮಾತ್ರ ಮೇಲೆ ಹೇಳಿದ ಆ ಮೂರೂ ಮೂಲಭೂತ ವಿಚಾರಗಳಲ್ಲಿ ಅರಿವನ್ನು ಮೂಡಿಸಿಕೊಂಡು ಅಭಿವೃದ್ಧಿಯಲ್ಲಿ ಮುನ್ನಡೆದಾಗ ಮಾತ್ರ ಅಂತಹ ಒಂದು ಅಭಿವೃದ್ಧಿಗೆ ನಿಜವಾದ ಅರ್ಥ ಕಲ್ಪಿಸಬಹುದಾಗಿದೆ. ಇದರಲ್ಲಿ ಸಮಾಜದ ಹಾಗೂ ಕುಟುಂಬದಲ್ಲಿ ಪುರುಷರ ಪಾತ್ರ ಹಾಗೂ ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಳ್ಳುವ ಯೋಜನಕಾರರ ಮೇಲಿನ ಜವಾಬ್ದಾರಿಗಳು ಅತ್ಯಂತ ಹೆಚ್ಚು ಮಹತ್ವ ಪಡೆಯುತ್ತವೆ. ಅಂತಹ ಯೋಜನೆಗಳು ಲಿಂಗ ಸಂಬಂಧೀ ಶಕ್ತಿಗಳನ್ನು ಹೊರತುಪಡಿಸಿ, ನೇರವಾಗಿ ಮಹಿಳೆಯರನ್ನು ತಲುಪುವಂತೆ, ನೋಡಿಕೊಳ್ಳುವುದೇ ಅದಲ್ಲಿ ನಿಜವಾದ "ಮಹಿಳಾಭಿವೃದ್ಧಿ" - ಆ ಮೂಲಕ "ಮಾನವಾಭಿವೃದ್ಧಿ" ಸಾಧ್ಯವಾಗುತ್ತದೆ.

*ಡಾ|| ಮಂಗಳಾ ಎಸ್. ಎಂ.*
ಮೈಸೂರು

## ಬಯಲ ಬಾಯಾರಿಕೆ

ಹೋಗಬೇಕಿದೆ ನಡೆದು ತಣ್ಣಗೆ
ಕುಡಿಯುತ್ತ ನಿರ್ಜನ ಬಯಲ ಸುಖವಾ
ಚಿಕ್ಕಿಯೊಂದಿಗೊಂದಿಷ್ಟು ಮಾತು
ಚಂದಿರನ ಮುಗುಳುನಗೆ ಸಾಕಲ್ಲವ?
ಬಂದರೆ ಸಾವರಿಸಿ ದೂರದಿಂದೆಲ್ಲಿಂದೋ
ಕೇದಗೆಯ ಕಂಪು ಬರಲಿ.
ಬೆನ್ನಿಗಿರಲಿ ಟಿಂವಕ್ಕಿ ಹಾಡು
ಮೆಲ್ಲರರ ನೇವರಿಕೆ ನಿಲ್ಲದಿರಲಿ
ಪಾದ ಚುಚ್ಚುವ ಚೂಪುಗಲ್ಲುಗಳ
ಅಲ್ಲಲ್ಲೇ ತುಳಿಯುತ್ತ
ಸಾಗಬೇಕಿದೆ ಸುಮ್ಮಗೆ
ಒಳಗೆ ಸಿಡಿಯುತ್ತಿರುವ ಸಿಡಿಮದ್ದುಗಳನ್ನೆಲ್ಲ
ನುಂಗಬೇಕಿದೆ ತಣ್ಣಗೆ.
ಬಟ್ಟಬಯಲ ಬೆಳದಿಂಗಳಲಿ
ದಿಟ್ಟಮರೆಯಾದ ಅಕ್ಕ
ಈ ಕತ್ತಲ ಕಡಲೊಳಗೆ ಈಜಲಾರದೆ
ಬೆಳದಿಂಗಳ ದಾರಿಯಲಿ ಹೇಗೆ ಬರಲಿ?
ನಿರಾಕಾರಿ ಹುಡುಕಾಟಗಳ ಧೇನಿಸುತ್ತ
ಸರಿದು ಹೋಗಲಿ ಹೇಗೆ ಬರಿದೇ
ಬಯಲ ಬಾಯಾರಿಕೆಗೊಂದು
ಹರಿವ ತೊರೆಯೂ ಆಗದೇ?

- *ಡಾ. ವಿನಯಾ, ಸವಣೂರು*

ಭಾರತೀಯ ಹೆಣ್ಣಿನ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿದೆ. ಅವಳ ಅಡಿಗೆ ಮನೆಯ ಗುಲಾಮಗಿರಿಯ ಜೊತೆಗೆ, ಅವಳು ಬಳಸುವ ಒಲೆಯ ಉಸಿರು ಕಟ್ಟಿಸುವ ಹೊಗೆಯೂ ಸೇರಿಕೊಂಡು ಪರಿಸ್ಥಿತಿ ಇನ್ನಷ್ಟೂ ಕರುಣಾಜನಕವಾಗಿಬಿಟ್ಟಿದೆ. ಅವಳಿಗೂ ಅಡಿಗೆ, ಊಟಕ್ಕೆ ನಿಗದಿಯಾದ ವೇಳಾಪಟ್ಟಿಯೊಂದಿರಬೇಕು. ಅಡಿಗೆ ಮನೆಯಲ್ಲಿ ಹೊಗೆ ಸಲೀಸಾಗಿ ಹೋಗುವ ಚಿಮಣಿಯಿರಬೇಕು. ಅರೆ ಹೊಟ್ಟೆ, ನಿರುದ್ಯೋಗ ಹಾಗೂ ಅನ್ಯಾಯಗಳ ವಿರುದ್ಧದ ಹೋರಾಟದಲ್ಲಿ ಅವಳೂ ಪಾಲ್ಗೊಳ್ಳಬೇಕು.

*ರಾಮ ಮನೋಹರ್ ಲೋಹಿಯ*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 100 ರೂ.**

*ಸಂ. ಮಂಡಳಿ*

REGD No. CPMG/KA/BGE/289/2000

BOOK-POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067